Rare 6



# ಬಿರಿದ ಮುಗುಳು

ಕುರಾಮುಶೀಗಾವಿ

8K3.6
GOP

# ಬಿರಿದ ಮುಗುಳು

(ಹತ್ತರ ಮೇಲೆರಡು ಕತೆಗಳ ಸಂಕಲನ)

ಬರೆದವರು
ಶ್ರೀ ಎಸ್. ಗೋಪೀಚಂದ ರಾವ್

ಪ್ರಕಾಶಕರು
ನವಯುಗ ಎಂಟರ್‌ಪ್ರೈಸ್ ಲಿಮಿಟೆಡ್
ನವಯುಗ ಪ್ರೆಸ್
ಉಡುಪಿ

ಪುಟಗಳು ೧೨೬ ಬೆಲೆ ರೂ. ೧=೫೦

# ಮೊದಲ ಮಾತು

"ಬಿರಿದ ಮುಗುಳು" ಪುಸ್ತಕ ರೂಪದಲ್ಲಿ ಪ್ರಕಟವಾದ ನನ್ನ ಆರನೆಯ ಕೃತಿ. ಇದನ್ನು "ಬಿರಿದ ಮುಗುಳೆ"ನ್ನುವುದಕ್ಕಿಂತಲೂ "ಅರೆಬಿರಿದ ಮುಗುಳು" ಎಂದು ಕರೆದರೇನೇ ಉಚಿತವೆಂದು ನನ್ನೆಣಿಕೆ. ಆದರೆ,ಇದು ಶ್ರುತಿಸಹ್ಯವಾಗದೆಂಬ ಅನುಮಾನದಿಂದ "ಅರೆ"ಯನ್ನು ನನ್ನ ಲ್ಲಿಯೇ ಉಳಿಸಿಕೊಂಡು ಮಿಕ್ಕ ಪದಗಳಿಂದ ನಾಮಕರಣ ಮಾಡಿದ್ದೇನೆ.

ಕತೆಗಾರ ಸ್ವಯಂಪ್ರಭುವಾಗಲಾರ; ಸರ್ವಜ್ಞನಾತನೆಂದೂ ಅಲ್ಲ, ಕಂಡು; ಕೇಳಿ, ಓದಿ, ಅನುಭವಿಸಿದ ಒಂದಲ್ಲ ಒಂದು ಸನ್ನಿವೇಶದಿಂದಲೇ ಆತ ಸ್ಫೂರ್ತಿ ಪಡೆದು ಕತೆಯೆನ್ನುವುದನ್ನು ಬರೆಯುತ್ತಾನೆ. ಅದು ಭಟ್ಟಿಯಿಂದಿಳಿದು ಬಂದ ಉತ್ತಮ ಕಥೆಯಾಗಲೂ ಬಹುದು; ಇಲ್ಲವೇ ಓದುಗರ ಕಣ್ಣುಗಳಿಗೆ, ಮನಸ್ಸಿಗೆ ವ್ಯರ್ಥ ವ್ಯಥೆಯಾಗಲೂ ಬಹುದು. ಹೊಸ ಹೊಸ ವಸ್ತುಗಳ ಸೌಂದರ್ಯವನ್ನು ಕಾಣುವ ಕಣ್ಣು ಎಲ್ಲರಿಗೂ ಇರುವುದಿಲ್ಲ. ಪ್ರಪಂಚದಲ್ಲಿ ಹೊಸ ವಸ್ತು ಎಂಬುದೂ ಇರುವುದಿಲ್ಲ. ಎಲ್ಲರೂ ನೋಡುವುದು ಅದೇ ನದಿ, ಅದೇ ಗುಡ್ಡ, ಅದೇ ಕಾಡು, ಅದೇ ಆಕಾಶ, ಅದೇ ಪ್ರಾಣಿ ಮೃಗ ಪಕ್ಷಿ ಸಂಕುಲಾದಿ. ಎಲ್ಲವೂ ಜನಮೇಜಯನ ಕಾಲಕ್ಕೂ ಹಿಂದೆ ಇದ್ದವುಗಳೇ. ಎಲ್ಲರೂ ನೋಡಿ, ಕೊಂಡು, ತಿಂದು, ಉಗುಳಿ ಬಿಟ್ಟವುಗಳೇ. ಆದರೂ ನೋ ಡುವ ಕಣ್ಣು ಬೇರೆಯಾದಂತೆ ಕಾಣುವ ದೃಷ್ಟಿಯೂ ಬದಲಾಗಲೇ ಬೇಕು. ದೃಷ್ಟಿಯೆಂಬುದಕ್ಕೆ ಸ್ವತಂತ್ರತೆ, ಸಹೋದರತೆ, ಸಮಾನತೆಯು ಈ ಯುಗದಲ್ಲೂ ಕೊನೆಯದಿನ್ನೂ ದೊರೆತಿಲ್ಲವಲ್ಲ!

ನನ್ನ ಕಣ್ಣುಗಳಿಂದ ನನ್ನ ದೃಷ್ಟಿಯಿಂದ ಕಂಡ, ನನ್ನ ಕಿವಿಯಿಂದ ಕೇಳಿದ, ನನ್ನ ಬುದ್ಧಿಬಲದಿಂದ ಓದಿದ (ಅದು ದುರ್ಬುದ್ಧಿಯೇಕಾಗ ಬಾರದು?), ನನ್ನ ಜೀವನದಲ್ಲಿ ಅನುಭವಿಸಿದ (ಅದು ಬರಡು ಜೀವನ ವಿರಲಾರದೇಕೆ?) ವಿವಿಧ ಸಂದರ್ಭ-ಸನ್ನಿವೇಶಗಳಿಂದ ಪ್ರೇರಿತನಾಗಿ ಬರೆದಿದ್ದ ಹನ್ನೆರಡು 'ಕತೆ'ಗಳ ಕಂತೆಯನ್ನು ಇಲ್ಲಿ ಒಗ್ಗೂಡಿಸಿದ್ದೇನೆ. ಈ ಕಂತೆಯನ್ನು ಕನ್ನಡಿಗರು ಎತ್ತಿಕೊಳ್ಳಲು ಹಿಂಜರಿಯಲಾರರೆಂದು ಭಾವಿಸಿದ್ದೇನೆ.

ಇಂತು

ಗೋರಾ.

## ಪರಿವಿಡಿ

# ೧ ಕಾಯದೆ ಒಪ್ಪದ ಸಂಪತ್ತು

ನದಿಯ ಕಿನಾರೆಯಲ್ಲಿ ಅಂಬಿಗ ಅಚ್ಚಣ್ಣ ಇನ್ನೂ ಕಾಯುತ್ತಿದ್ದ. ಗಂಟೆ ಎಂಟು ದಾಟಿರಬೇಕು; ಆಕಾಶದಲ್ಲಿ ಚಂದ್ರ ಉದಿಸಿ ಮಾರು ಮೇಲೇರಿದ್ದರೂ ಭಟ್ಟರ ಉದಯವಿನ್ನೂ ಹೊಳೆದಂಡೆಯಲ್ಲಿ ಆಗಿರಲಿಲ್ಲ. ದಿನವೂ ಇಷ್ಟು ಹೊತ್ತಿನೊಳಗೆ ಅವರು ಬಂದು "ಅಚ್ಚಣ್ಣಾ" ಎಂದ ಮಾತ್ರಕ್ಕೆ ಮೂರು ನಯೇ ಪೈಸೆ ಮಾತ್ರವಲ್ಲ ಒಂದು ಬೀಡವೂ ಬಾಯಿಗೆ ಬಿತ್ತು ಎಂದು ಆತ ನಿಶ್ಚಯಿಸುತಿದ್ದ. ಎಂದರೆ, ಭಟ್ಟರು ಆತನ ಸೇವೆಗೆ ತುಸು ಮಿಗಿಲಾಗಿಯೇ ಪ್ರತಿಫಲವೀಯುತಿದ್ದರು. ಪೈಸೆಯ ಆಸೆಗಲ್ಲವಾದರೂ ಎಲೆಯಡಿಕೆಯ ವ್ಯಾಮೋಹ ಆತನನ್ನು ಇಂದು ಅಲ್ಲಿ ಕುಳಿತಿರುವಂತೆಸಗಿತ್ತು. ಇಲ್ಲವಾದರೆ, ತನ್ನನ್ನು ಕರೆಯಬಂದ, ಅಪ್ಪು, ಇಸರ, ದೂಜ ಮೊದಲಾದ ತನ್ನ ಸನ್ಮಿತ್ರರನ್ನು ಆತನೇಕೆ ಮುಂದಾಗಿ ಕಳಿಸುತಿದ್ದ? ಭಟ್ಟರು ಒಂದು ರೀತಿಯಿಂದ ಆತನ ಧನಿಯರೂ ಹೌದು; ಇನ್ನೊಂದು ದೃಷ್ಟಿಯಲ್ಲಿ ಉಳಿದ ಯಾತ್ರಿಕರಂತೆ ಮಾಮೂಲು ಗಿರಾಕಿ ಗಳೂ ಹೌದು.

ಅಚ್ಚಣ್ಣನಿಗೆ ಭಟ್ಟರ ಮೇಲೆ ಒಂದು ತರದ ಅವರ್ಣನೀಯ ಗೌರವ. ಅದು ಹುಟ್ಟುವುದಕ್ಕೂ ಒಂದು ಕಾರಣವಿದೆ. ಒಂದು ದಿನ ಆತ ತನ್ನ ದೋಸ್ತಿ ದೂಜ ಸೋಜನೊಡನೆ ತಿರುಗಾಡುತ್ತ ಇರುವಾಗ, ಮಾತಿಗೆ ಮಾತು ಬಂತು. ದೂಜ ಸೋಜ ಕಡವನ್ನು ಏಲಂನಲ್ಲಿ ವಹಿ ಸುತ್ತ ಬಂದು ಅಂದಿಗೆ ಇಪ್ಪತ್ತು ವರ್ಷಗಳಾಗಿದ್ದುವು. ಆದೇ ಆಗ ಹೊಸತಾಗಿ ಏಲಂ ಆಗುವುದೆಂದೂ ಸಾರಲಾಗಿತ್ತು. ಎಲ್ಲೊ ಹಾಕಿ ಕೊಂಡಿದ್ದ 'ದರಂ' ತುಸು ಜಾಸ್ತಿಯಾದುದರಿಂದ ಮಾತಿಗೆ ಮಾತು ತಾಗಿ ದೂಜನಲ್ಲಿ ಪಂಥಕ್ಕೆ ನಿಂತೇ ಬಿಟ್ಟ. ಏನೂ ಹೆಚ್ಚಿನ ಪಡವು ಇಲ್ಲದ ಕಡವು ಅದು; ಹೋದರೆ ಹೋಗಲಿ ಎಂದುಕೊಂಡ ಸೋಜ.

ಆದರೂ "ಆ ಪೂಜಾರಿಗೆ ಸೊಕ್ಕು ನೆತ್ತಿಗೇರಿದೆ" ಎಂದು ತನ್ನ ದರ್ಪ ತೋರಿಸದೆ ಉಳಿಯಲಿಲ್ಲ. ಅಂತೂ ಆ ವರ್ಷ ಕಡವಿನ ಕಾವಲು ಅಚ್ಚಣ್ಣನ ತಲೆಗೆ ಬಿತ್ತು. ಆದರೆ, ದೋಣಿ ಬೇಕಲ್ಲಾ! ಕೊನೆಗೆ ಭಟ್ಟರನ್ನೇ ಮರೆಹೋಗಬೇಕಾಯ್ತು. ಪರೋಪಕಾರ ಬುದ್ಧಿಯ ಭಟ್ಟರು ಆತನ ಸಹಾಯಕ್ಕೆ ನಿಂತರು. ಆ ಹಣದಲ್ಲಿ ಅಚ್ಚಣ್ಣ ಅಸಲನ್ನು ತೀರಿಸಿರದಿದ್ದರೂ ಪ್ರತಿ ವರ್ಷ ಬಡ್ಡಿಯಷ್ಟನ್ನು ಅವಶ್ಯ ಮುಟ್ಟಿಸಿದ್ದ. ಭಟ್ಟರು ಈ ಬಗ್ಗೆ ಪ್ರಸ್ತಾಪಿಸುತ್ತಿರಲಿಲ್ಲ; ಆದರೂ ಸಾಲಗಾರನನ್ನು ಸಾಲದ ಶೂಲ ಕಾಡದಿರುವುದೇ? ಮೊದಲೆರಡು ವರ್ಷ ಇದೇ ಸಂಕಟ ಆತನನ್ನು ಕಾಡುತಿತ್ತು; ಮುಂದೆ ದೋಣಿಯೇ ಅವರದು; ತಾನು ಪಡೆಯುವ ಕಡವಿನ ಕಾಸು ತನ್ನ ಸಂಬಳದ್ದು ಎಂದು ತಿಳಿದುಕೊಂಡ. ಇದನ್ನೇ ಒಂದು ಬಾರಿ ಭಟ್ಟರೊಡನೆಯೂ ಸೂಚಿಸಿದ. ಇದನ್ನು ಕೇಳಿದ ಅವರು ತಾಂಬೂಲ ತುಂಬಿದ ಬಾಯಲ್ಲಿ ಮುಗುಳ್ನಕ್ಕರು. ಈ ನಗುವು ಏನು ಸೂಚಿಸುತಿತ್ತೊ, ಅಚ್ಚಣ್ಣನಂತೂ ಭಟ್ಟರು ಹೌದೆಂದರೆಂದೇ ತಿಳಿದುಕೊಂಡ.

ಅದುವರೆಗೂ ಬಾರದಿದ್ದ ಭಟ್ಟರನ್ನು ಬಿಟ್ಟು ಅಚ್ಚಣ್ಣ ಮುಂದೆ ಹೋಗುವಂತಿಲ್ಲ. ಆತ ಅಲ್ಲೇ ದೋಣಿಯ ಕೊಂಬಿನಲ್ಲೇ ಕೂತು ಕಣ್ಣು ಕೂರತೊಡಗಿದ. ಅದೆಷ್ಟು ಸಮಯ ಆತನಲ್ಲಿ ಕೂತಿದ್ದನೋ, "ಯಾರದು ದೋಣಿಯಲ್ಲಿ?" ಎಂಬ ಚಿರಪರಿಚಿತ ದನಿಗೇಳಿ ದಿಗ್ಗನೆ ಎದ್ದು 'ಬನ್ನಿಹತ್ರ' ಎಂದ ತನ್ನ ಮಾಮೂಲು ಒರಟು ಸ್ವರದಲ್ಲಿ. "ಅಚ್ಚಣ್ಣನೊ? ಏನು, ಇನ್ನೂ ಹೋಗಿಲ್ಲ? ಅಲ್ಲಿಯೇ ಮಲಗಿಬಿಟ್ಟಿಯಾ?" ಎಂಬ ಭಟ್ಟರ ಮಾತಿನಿಂದ, ಸರಿಯಾಗಿ ಕಣ್ಣು ತೆರೆದ ಅಚ್ಚಣ್ಣ ಆಕಾಶವನ್ನೊಮ್ಮೆ ನೋಡಿದ.

ಕೃಷ್ಣಪಕ್ಷದ ಪ್ರಾರಂಭದ ದಿನವಾದುದರಿಂದ ಚಂದ್ರ ಕುಂದಿರಲಿಲ್ಲ. ಆತನ ಆ ಶುಭ್ರ ಬಿಂಬ ನಸು ಬಿಳಿಯ ಮೋಡಗಳೆಡೆ ಅತಿ ವೇಗವಾಗಿ ಧಾವಿಸುತ್ತಿರುವಂತೆ ಭಾಸವಾಗುತಿತ್ತು. ನಾನಾಕಾರದ ಮೋಡಗಳ ಸೌಂದರ್ಯ ಅವರ್ಣನೀಯವಾಗಿತ್ತು. ತಲೆ ತಗ್ಗಿಸಿದಾಗ, ಕಟ್ಟದ ನೀರು ತುಂಬಿದ್ದುದರಿಂದ ಆ ಅಲ್ಪ ವಿಶಾಲವಾದ ನದಿಯ

ನೀರನ್ನು ಚಂದ್ರನ ಕಿರಣಗಳು ಸ್ವರ್ಣರಸವನ್ನಾಗಿ ಮಾರ್ಪಡಿಸಿದ್ದುವು. ಆ ನಡುವೆ ತೇಲುವ ಬಂಗಾರದ ಮುದ್ದೆಯಂತಹ ಚಂದ್ರಬಿಂಬ ಕುಣಿಯುತಿತ್ತು. ಅಕ್ಕಪಕ್ಕ ಬೆಳೆದಿದ್ದ ಬಿದಿರ ಹಿಂಡಿಲುಗಳಲ್ಲಿ ಹಕ್ಕಿಗಳು ಕಿರಿ ಕಿರಿ ಗುಟ್ಟಿ ಹಿನ್ನೆಲೆಯಿಯುತಿದ್ದುವು. ದೂರದಲ್ಲಿ ನಾಯಿಗಳು ಈ ಹಿಮ್ಮೇಳಕ್ಕೆ ಸರಿಯಾಗಿ ರಾಗವೆಳೆಯುತಿದ್ದುವು. ಅಚ್ಚಣ್ಣ ತುಂಬ ಹೊತ್ತಾಗಿರಬೇಕು ಎಂದು ತಿಳಿದು, "ಧನಿಯರಿಗೆ ತಡವಾಯಿತೆಂತ ತೋರುತ್ತದೆ ಅದೇನೋ ಕಾರ್ಯಭಾರ.."ಎಂದು ರಾಗವೆಳೆದು ಕೈ ಮುಂದೆ ಚಾಚಿದ. ಯಾವಾಗಲೂ ಸರಿಯಾಗಿ ಮಾತಾಡುತ್ತಿದ್ದ ಭಟ್ಟರು ಇಂದು ಕಿಸೆಗೆ ಕೈ ಹಾಕಿ ತಾಂಬೂಲ ದಕ್ಷಿಣೆಯನ್ನು ಆ ಕೈಗಳಿಗೆಸೆದು ಮಾತಾಡದೆ ದೋಣಿ ಹತ್ತಿದರು. ಅಚ್ಚಣ್ಣ ಬೀಡ ಬಿಡಿಸಿ, ಅಡಿಕೆ ಬಾಯಿಗೆಸೆದು ತಲೆಗೆ ಸುತ್ತಿದ ಅಂಗವಸ್ತ್ರದಿಂದ ಎಲೆಗಳನ್ನು ಒಂದೊಂದಾಗಿ ಒರಸಿ, ಅವುಗಳ ತೋರ ನರವನ್ನು ಉಗುರಿನಿಂದ ಕೆತ್ತಿ ಸುಣ್ಣವನ್ನು ಹಚ್ಚಿ ಮಡಚಿ ಬಾಯಿಗಿಟ್ಟು ಜಗಿಯುತ್ತ ಹೊಗೆಸೊಪ್ಪಿಗೆ ಸುಣ್ಣ ಹಚ್ಚುತ್ತ ದೋಣಿಯನ್ನು ಕಟ್ಟಿದ ಹಗ್ಗವನ್ನು ಸಡಿಲಿಸಿದ. ಹೊಗೆಸೊಪ್ಪನ್ನು ಬಾಯಿಗೆಸೆದು ಎರಡೂ ಕಾಲುಗಳನ್ನು ಅಡಿಯಾಳದ ನೀರಿನಡಿ ಬಲವಾಗಿ ಊರಿ ಕೈಗಳಿಂದ ದೋಣಿಯನ್ನು ಮುಂದಕ್ಕೆದೂಡಿದ. ತಾನೂ ಹತ್ತಿ ಕುಳಿತು ಜಲ್ಲ ಹಾಕತೊಡಗಿದ. ಆ ಜೋತ್ಸ್ನೆಯ ನೀರನ್ನು ಸೀಳುತ್ತ ಕಲಕಲ ನಾದದೊಡನೆ ದೋಣಿ ಆಚೆ ದಡವನ್ನು ಸೇರಿತು. ಭಟ್ಟರು ಇಳಿದು ಹೊರಟುಹೋದರು. ಅಚ್ಚಣ್ಣನು ಮುಖಮುಖ ನೋಡತೊಡಗಿದ. ಯಾವಾಗಲೂ ಬಾಯಿ ತುಂಬ ಆಡಿಕೊಳ್ಳುತಿದ್ದ ಭಟ್ಟರ ಮೌನದ ಕಾರಣ ಆತನಿಗೆ ತಿಳಿಯಲಿಲ್ಲ. ಆದರೂ ಆ ಬಗ್ಗೆ ಆತನಿಗೆ ಹೆಚ್ಚು ಯೋಚಿಸಲು ಅವಕಾಶವೇ ಉಳಿದಿರಲಿಲ್ಲ. ಇನ್ನು ಒಂದು ಮೈಲು ಒಬ್ಬನೇ ನಡೆದು ಇನಾಸ ಸೋಜನ ಮನೆಗೆ ಹೋಗಬೇಕಿತ್ತು. ಅಲ್ಲಿ ಆತನ ಸ್ನೇಹಿತರು ಇವನ ಬರವನ್ನೇ ಕಾದು ಕುಳಿತಿದ್ದರು. ಏನೋ ಮಿಲ್ಲಿನ ಗಿರಣಿ ಕೆಟ್ಟುಹೋಗಿರ ಬಹುದು, ಅದೇ ಚಿಂತೆಗೆ ಕಾರಣವಿರಬಹುದು ಎಂದುಕೊಂಡು ಆತ ದೋಣಿಯನ್ನು ಬಂಧಿಸಿ ಅಲ್ಲಿಂದ ಕಂಬಿಕಿತ್ತ.

ಮಲೆಬೆಟ್ಟು ರಾಮಭಟ್ಟರೆಂದರೆ, ಅಲ್ಲಿ ಮಾತ್ರವಲ್ಲ ಸುತ್ತಲಿನ ನಾಲ್ಕು ಹಳ್ಳಿಯ ಜನರಿಗೂ ಗೊತ್ತು. ಇವರ ಮಾವ ಅನಂತ ಭಟ್ಟರು ಅಪುತ್ರರಾದುದರಿಂದ ತಂಗಿಯನ್ನೊಲಿಸಿ ಇವರನ್ನು ದತ್ತಕ್ಕೆ ಕೊಂಡುಕೊಂಡಿದ್ದರು. ಮಾವನ ಆಸ್ತಿಯಾಗಿ ಒಂದಷ್ಟು ಭೂಮಿ ಮಾತ್ರವಲ್ಲ, ಆಯುರ್ವೇದ ವೈದ್ಯ, ಪೌರೋಹಿತ್ಯ ಹಾಗೂ ಊರ ಉಮಾಮಹೇಶ್ವರ ದೇವಾಲಯದ ಅರ್ಚಕತನವಿಷ್ಟೂ ಅವರಿಗೆ ಬಂದಿದ್ದುವು. ಮಾವನ ಮರಣಾನಂತರ ಇವಕ್ಕೆಲ್ಲ ಉತ್ತರಾಧಿಕಾರಿಯಾದ ರಾಮಭಟ್ಟರು ಕೆಲ ಸುಧಾರಿತ ತರುಣರ ಕಿವಿಮಾತಿನಿಂದ ಉಬ್ಬಿ ಆಯುರ್ವೇದ— ಪೌರೋಹಿತ್ಯಗಳಿಗೆ ತಿಲಾಂಜಲಿಯಿತ್ತರು. ನಗದಿ ಹಣದಿಂದ ಒಂದು ಮಿಲ್ಲನ್ನು ಇಟ್ಟರು. ವರ್ಷದಲ್ಲಿ ಆರು ತಿಂಗಳು ನಡೆಯುತಿದ್ದ ಈ ಅಕ್ಕಿ ಮಾಡುವ ಮಿಲ್ಲು ಅವರಿಗೇನೂ ನಷ್ಟವಾಗಲಿಲ್ಲ. ಆದರೆ, ಅವರ ಅರ್ಚಕತನಕ್ಕೆ ಮಾತ್ರ ಇದು ಹೊಂದಿಕೊಳ್ಳುತ್ತಿರಲಿಲ್ಲ. ಎಂತಲೆ, ಊರಿನ ಪ್ರಮುಖರಾದ ಪಡುಮನೆ ವ್ಯಾಸ ಭಟ್ಟರನ್ನು ಇದಕ್ಕೆ ನಿಯಮಿಸಿದರು. ದೇವರಿಗೇನು, ಯಾರು ಕೊಟ್ಟರೂ ತಿನ್ನುತ್ತಾನೆ; ಆದರೆ, ಅಕ್ಕಿ ಮಿಲ್ಲಿನಲ್ಲಿ ಯಾರು ಯಾರು ಬಂದು ಕಾರುಭಾರು ಮಾಡುವುದಕ್ಕಾಗುತ್ತದೆಯೆ? ಮೊದಮೊದಲು ಅತೀವ ವಿಶ್ವಾಸದಿಂದ ನಡೆದುಕೊಳ್ಳುತ್ತಿದ್ದ ವ್ಯಾಸ ಭಟ್ಟರು ಇಂದಿಗೂ ಆ ವಿಶ್ವಾಸವನ್ನು ಉಳಿಸಿಕೊಂಡಿದ್ದರು. ಆದರೆ, ಇಂದು ಅವರ ಕಿವಿಗೆ ಅಬ್ದುಲ್ ಸಾಹೇಬನು ಹಾಕಿದ ವರ್ತಮಾನವೊಂದು ತಾನು ಅಚಲವಾಗಿ ನಂಬಿದ್ದ ಆ ವ್ಯಕ್ತಿಯ ಮೇಲೆ ಸಂದೇಹ ಮೂಡುವಂತೆಸಗಿತ್ತು.

"ವ್ಯಾಸ ಹಾಗೆ ಮಾಡಿಯಾನೆ?" ಎಂಬ ಪ್ರಶ್ನೆ ಅವರನ್ನು ಕಾಡಿತ್ತು. "ಇಲ್ಲ. ಅಷ್ಟು ಧೈರ್ಯ ಆತನಿಗೆ ಬರಲಾರದು. ಅದರಲ್ಲೂ ಗರ್ಭಗುಡಿಯ ಒಳಗಿನ ಕಲ್ಲಿನಲ್ಲಿ ಕತ್ತಲೆಯ ಸುತ್ತಲಿನಲ್ಲಿ ರಾಶಿ ಹಾಕಿದ್ದ ಆ ತಾಮ್ರಕ್ಕೆ ಕೈಕೊಡುವಷ್ಟು ಎದೆಗಾರಿಕೆ ಅವನಿಗೆ ಖಂಡಿತಕ್ಕೂ ಇಲ್ಲ. ದೇವರ ವಸ್ತುವನ್ನು ತೆಗೆಯುವುದೆಂದರೆ....!" ಎಂದು ಸಮಾಧಾನ ತಾಳಲು ಯತ್ನಿಸುತ್ತಿದ್ದರು. "ಆದರೆ ಅಬ್ದುಲ್ಲನಿಗೆ ಅವರ ಮೇಲೆ ದ್ವೇಷವೇನು? ಅವನೇಕೆ ಸುಳ್ಳುಹೇಳ ಬೇಕು? ತನ್ನ

ಲ್ಲಿಗೇನೇ ಒಂದುಬಾರಿ ಒಂದು ಮಣತಂದು ಮಾರಿದ್ದರೆಂದೂ, ಮುಂದೆ ತಂದಾಗ ತನಗೆ ಸಂದೇಹ ಬಂದು ಬೇಡವೆಂದು ಮರಳಿಸಿದ್ದೇನೆಂದೂ ಆತ ಹೇಳುತ್ತಾನೆ. ಈಗ ನಾಲ್ಕಾರು ತಿಂಗಳುಗಳಲ್ಲಿ ಕಡಿಮೆ ಪಕ್ಷ ಐವತ್ತು ಅರುವತ್ತು ಮಣ ತಾಮ್ರವನ್ನು ವ್ಯಾಸ ಭಟ್ಟರು ಪೇಟೆಗೆ ತಂದಿದ್ದಾರೆ— ಎನ್ನುತ್ತಾನೆ ಆತ!"

ದೇವಾಲಯದ ಗರ್ಭಗುಡಿಗೆ ಒಂದು ಕಾಲದಲ್ಲಿ ತಾಮ್ರ ಹೊದಿಸಿದ್ದರಂತೆ. ಮುಂದೆ ಅದರ ರಿಪೇರಿಯಾಗುವಾಗ, ಅದನ್ನು ಕಿತ್ತು ಹಾಕಿದ್ದರಂತೆ. ತಾಮ್ರದ ಬೆಲೆಯೇರುತ್ತ ಬಂದುದರಿಂದ ಇದ್ದ ತಾಮ್ರ ಸಾಲದುದರಿಂದ, ತುಸು ಅಗ್ಗವಾದ ಮೇಲೆ ಕೊಂಡು ಕೊಂಡು ಹಾಕೋಣವೆಂದು ಮುಕ್ತೇಶರ ತಿಮ್ಮಣ್ಣ ಶೆಟ್ಟರು ಹೇಳಿದರಂತೆ. ಅದರಂತೆ ದೇವಸ್ಥಾನಕ್ಕೆ ಕಳ್ಳರು ಬರಲಾರರೆಂಬ ವಿಶ್ವಾಸದಿಂದ ಅಲ್ಲಿಯೇ ಕತ್ತಲೆಯ ಸುತ್ತಿನಲ್ಲಿ ರಾಶಿಯೊಡ್ಡಿದ್ದರಂತೆ. ಇಲಿ ಬಾವಲಿಗಳು ಮಾತ್ರವಲ್ಲ ಹಾವುಗಳೂ ಅದನ್ನು ತಮ್ಮ ನಿಧಾನವನ್ನಾಗಿ ಮಾಡಿಕೊಂಡು ಕಾಯುತ್ತಿರುವುವಂತೆ! ತಿಮ್ಮಣ್ಣ ಶೆಟ್ಟರು ಇಹಲೋಕ ಕಾರ್ಯಭಾರವನ್ನು ಮುಗಿಸಿದ ಮೇಲೆ ಅವರ ಅಳಿಯಂದಿರು ಹೊಡೆದಾಡಿ ಪಾಲು ಪಟ್ಟಿ ಗಲಾಟೆಯಲ್ಲಿ ಎಲ್ಲವನ್ನು ಕಳೆದುಕೊಂಡು ದಿನ ಯಾಪನೆಗಾಗಿ ಒದ್ದಾಡುವ ಕಾಲ ಬಂದಿದೆಯೀಗ. ದೇವಮಂದಿರದ ಶಿವರಾತ್ರಿಯ ದಿನ ಒಡೆದ ಹಂಚನ್ನೇ ಬದಲಿಸಲು ಶಕ್ತನಾಗದ ಮುಕ್ತೇಶರ ಮಹಾಬಲ ಶೆಟ್ಟಿ ತಾಮ್ರ ಹೊದಿಸುವುದುಂಟೆ? ಆತನಿಗೂ ಈ ತಾಮ್ರದ ಗುಟ್ಟುಗೊತ್ತಾಗಿ ಅದನ್ನು ತೆಗೆಯಲು ಅಜ್ಞಾಪಿಸಿದನಂತೆ-ತನ್ನ ಯೌವನದ ಕಾಲದಲ್ಲಿ! ಆದರೆ ಸರ್ಪ ಬಾಧೆಯಿಂದ ಆತ ಅಸಮರ್ಥನಾದನಂತೆ!—ಈ ಎಲ್ಲ ಕಥೆ ರಾಮ ಭಟ್ಟರು ಎಳೆಯ ಹುಡುಗನಾಗಿದ್ದಾಗ ಅವರ ಅತ್ತೆಯ ಬಾಯಿಯಿಂದ ಕೇಳಿದುದು. ಈಗ ಅತ್ತೆ ತೀರಿಹೋಗಿ ವರ್ಷ ಮೂವತ್ತಾಯಿತು! ಅಲ್ಲಿ ತಾಮ್ರ ಇದ್ದದ್ದಂತೂ ನಿಜವೇ. ಆದರೆ, ಎಷ್ಟಿತ್ತು ಎಂದು ಯಾರಿಗೆ ಗೊತ್ತು? ಅದನ್ನು ನೋಡಿದವರೇ ಈಗಿನವರಲ್ಲಿ ಇಲ್ಲದಿರುವಾಗ, ಅಲ್ಲಿ ಅದು ಇತ್ತು ಎಂದು ಕಾನೂನಿನ ಪ್ರಕಾರ ನಂಬುವುದು ಹೇಗೆ? ತಾನು

ಅಧಿಕಾರ ಸ್ವೀಕರಿಸುವಾಗಲಂತೂ ಒಂದು ಬಾರಿ ನೋಡಬಾರದಾಗಿತ್ತೆ-ಎನಿಸಿತು ಅವರಿಗೆ. ಇದೇ ಚಿಂತೆಯಿಂದ ಅವರು ಹೇಗೋ ಹೇಗೋ ನಡೆದು ಮನೆ ಸೇರಿದರು. ರಾತ್ರೆ ಮಲಗಿದರೆ ವಿಚಿತ್ರ ಕನಸು. ಮಾವ ಅನಂತ ಭಟ್ಟರು ಹಾಗೂ ಹಿಂದಿನ ಮುಕ್ತೇಸರ ತಿಮ್ಮಣ್ಣ ಶೆಟ್ಟರು ರುದ್ರಾಕ್ಷಾರ ತಾಳಿ ಇವರನ್ನು ಕಾಡುತ್ತಿದ್ದರು. ಉಮಾಮಹೇಶ್ವರನ ತಾಮ್ರವನ್ನು ತಿಂದೆ ಎಂದು ಗರ್ಜಿಸುತಿದ್ದರು.

"ಇಲ್ಲ—ನಾನು ಮುಟ್ಟಲ್ಲ...ನನಗೆ ಗೊತ್ತೂ ಇಲ್ಲ...." ತೊದಲುತ್ತ ಉತ್ತರಿಸಿದರು ಭಯಭೀತರಾಗಿ, ಮುಕುಲಕರಪುಟರಾಗಿ ರಾಮ ಭಟ್ಟರು.

"ದೇವಾಲಯದ ಪೂಜಾರಿಯಾಗಿ ನೀನು ಗೊತ್ತಿಲ್ಲ ಎಂದರಾಗುತ್ತದೆಯೆ?" ಗಟ್ಟಿಯಾಗಿ ಹೂಂಕರಿಸಿ ಕೇಳಿದರವರು.

"ನಾನು....ನಾನು....ವ್ಯಾಸನಿಗೆ ಒಪ್ಪಿಸಿದ್ದೇನೆ...."

"ನೀನು ವ್ಯಾಸನಿಗೆ ಕೊಟ್ಟಿದ್ದಿ; ಆತ ಕದ್ದಿದ್ದಾನೆ. ಉಮಾಮಹೇಶ್ವರನ ಸೊತ್ತು ಕದ್ದು ಪೇಟೆಯಲ್ಲಿ ಆದಾಂ ಬ್ಯಾರಿಗೆ ಸಿಕ್ಕಿದ ಬೆಲೆಗೆ ಮಾರಿದ್ದಾನೆ. ಮಾರಿ ಬಂದ ಹಣವನ್ನು ಬೇಂಕಿನಲ್ಲಿಟ್ಟಿದ್ದಾನೆ."

"ಅದಕ್ಕೆ.... ನನ್ನ ಅಪರಾಧವೇನು?"

"ನಿಮ್ಮ ಅಪರಾಧವೆ? ಭಟ್ಟರೆ, ದೇವರ ಪೂಜೆಯ ಅಧಿಕಾರ ಕೊಟ್ಟಿದ್ದು ನಿಮಗೆ; ಆ ಮುಟ್ಟಾಳ ವ್ಯಾಸನಿಗಲ್ಲ. ದೇವರ ಪಟ್ಟಿ ಉತ್ತಾರ ಬಿಟ್ಟಿದ್ದು ನಿಮಗೆ; ಆ ಕಳ್ಳ ವ್ಯಾಸನಿಗಲ್ಲ. ಪೂಜೆ ವಿನಿಯೋಗ ಕಾವಲು ಮಾಡಬೇಕಾದವರು ನೀವು ನಿಮ್ಮ ಕರ್ತವ್ಯಕ್ಕೆ ತಪ್ಪಿಸಿ ಇನ್ನೊಬ್ಬರನ್ನು ತೋರಿಸಿದರೆ ಪ್ರಯೋಜನವೇನು? ಉಮಾಮಹೇಶ್ವರನ ಗಂಟು ಬೇಗನೆ ತುಂಬಿಸಿ" ಹೂಂ, ತುಂಬಿಸಿ....'

"ಅಯ್ಯೋ..." ಎಂದು ಆರ್ಭಟಿಸಿದರು ರಾಮ ಭಟ್ಟರು 'ಏನಾಯಿತು ಏನಾಯಿತು' ಎಂದು ದಿಗಿಲಿನಿಂದ ಕೇಳಿದರು ಅವರ ಪತ್ನಿ. ತೊಟ್ಟಿಲಲ್ಲಿ ಸುಖ ನಿದ್ರೆಮಾಡುತಿದ್ದ ಪುಟ್ಟ ಪಾಪ ದಿಗ್ಗನೆ ಎದ್ದು ಕೂಗತೊಡಗಿತು ಗಾಬರಿಯಿಂದ. ದೂರದಲ್ಲಿ ನಾಯಿಗಳ ಬೊಗಳಾಟ—ನರಿಗಳ ಕೂಗಾಟ ಕಿವಿಗಳಿಗೆ ಬಡಿಯುತಿತ್ತು. "ಏನಿಲ್ಲ......ಏನೋ

ಕನಸು....ಕೆಟ್ಟ ಕನಸು..." ಎಂದು ಸಾವರಿಸಿಕೊಂಡೆದ್ದು ಅಂಗಳದಲ್ಲಿ ಕಾಲಿಕ್ಕಿದರು. ಅಲ್ಲಿ ಚಂದ್ರನ ಬೆಳಕಿಷ್ಟೂ ಇರಲಿಲ್ಲ, ಮೇಲಕ್ಕೆ ನೋಡಿದರು. ಅಕ್ಷಿನಿಮೀಳನ ಮಾಡದಿರ ಬೇಕಾದ ನಕ್ಷತ್ರಗಣವನ್ನೂ ಚಂದ್ರನನ್ನೂ ಭಯಾನಕವಾದ ಕಮೋರ್ಡವೊಂದು ಆವರಿಸಿತ್ತು. 'ಹೌದು, ಚಂದ್ರನಿಗೂ ಮೋಡ ಕವಿಯುತ್ತದೆ; ಪಕ್ಷ ಬದಲುತ್ತದೆ' ಎಂದು ಎಂದುಕೊಂಡರು, ತನ್ನಲ್ಲಿ ತಾನೇ. ನಾಳೆ ಏನಾದರೂ ಆಗಲಿ, ಈ ಬಗ್ಗೆ ವಿಚಾರ ಮಾಡಲೇಬೇಕು ಎಂದಿತು ಅವರ ಅಂತರಾತ್ಮ.

ನೇಸರು ಮೂಡಲು ಇನ್ನೂ ಜಾಮುಹೊತ್ತಿರಬೇಕು. ಬೆಳ್ಳಿ ಮೂಡಿ ತುಸು ಮೇಲಕ್ಕೆ ಬಂದಿತ್ತು. ಬೆಳದಿಂಗಳ ಇರುಳನ್ನು ಹಗಲೆಂದು ಭ್ರಮಿಸಿ ಕಾಗೆಗಳು ಆಗಲೇ ಕಾಕಾ ಎನ್ನುತಿದ್ದುವು. ಕೋಳಿಗಳು ಬೆಳಗಾಗಲು ತಯಾರಾಗುತ್ತಿದೆಯೆಂಬದನ್ನು ಕೂಗಿ ಸಾರುತಿದ್ದುವು. ಪಡುವಣಿಂದ ತಂಗಾಳಿ ಮೆಲ್ಲಮೆಲ್ಲನೆ ಬೀಸಿ ನಿದ್ರೆ ಬಾರದವರಿಗೂ ನಿದ್ರೆಯ ಅಮಲನ್ನು ಕುಡಿಸುತಿದ್ದುವು. ನದಿ ದಂಡೆಯ ಬಕ ಪಕ್ಷಿಗಳೂ ಕಿರಿಕಿರಿ ಹಕ್ಕಿಗಳೂ ನಿದ್ರೆಯಿಂದೆದ್ದು ಬೆಳದಿಂಗಳು ಸವಿಯುವುದರಲ್ಲಿ ಚಕೋರವನ್ನು ಸ್ಪರ್ಧಿಸುತಿದ್ದುವು. ರಾಮ ಭಟ್ಟರು ಎದ್ದು ಮುಖಮಾರ್ಜನಾದಿ ಪ್ರಾತರ್ವಿಧಿಗಳನ್ನೂ ಸ್ನಾನ ಸಂಧ್ಯಾವಂದನೆಗಳನ್ನೂ ಪೂರಯ್ಸಿದರು. ಇಂದಿನ ದಿನಚರ್ಯೆ ಎಂದಿನಂತೆ ನಿಷ್ಠೆಯಿಲ್ಲದ ಕಾರಣ ಎಲ್ಲ ಮುಗಿಯುವಾಗ ಹೊತ್ತು ಬೆಳಗಾಗಿತ್ತು.

ರಾಮ ಭಟ್ಟರು ಯೋಚಿಸುತ್ತಾ ತಲೆ ತುರಿಸಿಕೊಂಡರು. ಸತ್ಯಶೋಧನೆಯು ಸಾಮಾನ್ಯ ಸಾಹಸವಲ್ಲ. ತನ್ನವನು, ತನ್ನ ನಿಕಟ ಸಂಬಂಧಿಕನು, ತನ್ನ ನೆರಮನೆಯಲ್ಲೇ ವಾಸಿಸಿ ಪ್ರತಿನಿತ್ಯ ತನ್ನ ಮುಖ ನೋಡಿ ದಿನ ದೂಡುತ್ತಿರುವ ವ್ಯಾಸ ಹೀಗೆ ದೇವರ ಸೊತ್ತನ್ನು ಅಪಹರಿಸಿದನೆಂದು ಯಾರಾದರೂ ಅಂದಿದ್ದರೆ, ಅವರನ್ನೇ ಗದರಿಸುತಿದ್ದರು. ಆದರೆ, ಈಗ ತನ್ನ ಕಿವಿಗೆ ಹಾಕಿದ ಸಾಹೇಬನೂ ತನ್ನ ವಿಶ್ವಾಸಕ್ಕೆ ಪಾತ್ರನಾದವನೇ. ವ್ಯಾಸನ ಇತ್ತೀಚೆಗಿನ ಜೀವನ–ವ್ಯವಹಾರ ಸುಧಾರಿಸಿತು ನಿಜ. ಆತನ ಇಬ್ಬರು ಮಕ್ಕಳು ಪರವೂರಲ್ಲಿ ಬಿಸಿನೀರು ಮಾರಿ ಹಣಗಳಿಸುತಿದ್ದಾರೆ. ಅದರಲ್ಲಿ ಸ್ವಲ್ಪ ತಂದೆಗೂ ಕಳಿಸಿದರೆ ಅದರಲ್ಲಿ ಆಶ್ಚರ್ಯವೇನು?

ಅಸಹಜತೆಯೇನು? ಎಂದುಕೊಂಡು ಭಟ್ಟರು ವ್ಯಾಸನನ್ನೇ ಗೋಪ್ಯವಾಗಿ ಪ್ರಸ್ತಾಪಿಸುವುದು ಉಚಿತವೆಂದು ಮಗ ಶ್ಯಾಮನನ್ನು ಆತನಲ್ಲಿಗೆ ಅಟ್ಟಿದರು. ಶ್ಯಾಮ ವ್ಯಾಸ ಭಟ್ಟರನ್ನು ಕರೆತಂದ.

ಬೆಳಗ್ಗಿನ ಜಾವದಲ್ಲಿ ಏಕಾಏಕಿಯಾಗಿ 'ಅಪ್ಪ ಕರೆಯುತ್ತಾರೆ' ಎಂಬ ಸಂದೇಶ ತಂದ ಶ್ಯಾಮನನ್ನು ಕಂಡು ಅವರು ತುಸು ಬೆಚ್ಚಿಬಿದ್ದರು. ಆದರೂ ಸ್ವಾಮಿ ಸೇವಕ ಸಂಬಂಧ ಕಡಿದುಕೊಳ್ಳಲಾರದೆ ಅವರು ಉಟ್ಟ ಬಟ್ಟೆಯಲ್ಲೇ ಹೊರಟು ಬಿಟ್ಟಿದ್ದರು. ಬಂದವರಿಗೆ ಆಸನ ತೋರಿಸಿ, ಗಂಗಾಮೃತ-ವೀಳೆಯ ಕೊಡಿಸಿ, ಮೆಲ್ಲನೆ ವಿಷಯದತ್ತ ನಾಲಿಗೆ ಹರಿಸಿದರು.- ರಾಮ ಭಟ್ಟರು.

"ಹೌದೋ ವ್ಯಾಸ, ಒಂದು ವಿಚಾರ ಕೇಳೋಣ ಎಂದು ಕರೆದೆ" ವ್ಯಾಸಭಟ್ಟರ ಎದೆಗೆ ಅಲಗಿನಿಂದ ಇರಿದಂತಾಯ್ತು. ಆದರೂ ಅದನ್ನು ತೋರಿಸದೆ, 'ತಮ್ಮ ಸೇವಕನಲ್ಲಿ ಆಜ್ಞಾಪಿಸ ಬೇಕು' ಎಂದೊಂದು ಬಾರಿ ಸುತ್ತ ಮುತ್ತ ನೋಡಿದರು. ಯಾರೂ ಇಲ್ಲದುದನ್ನು ಗಮನಿಸಿ ರಾಮ ಭಟ್ಟರು ತುಸು ಧೈರ್ಯದಿಂದಲೇ ಅಂದರು. 'ಅಲ್ಲ, ನಮ್ಮ ದೇವರ ಗರ್ಭಗುಡಿ ತೀರಾ ಜೀರ್ಣಿಸಿ ಹೋಗಿದೆಯಲ್ಲಾ; ಅದೇನು ಇಂದೋ ನಾಳೆಯೋ ಬೀಳುವಂತಿದೆ ಆದುದರಿಂದ ಅದನ್ನು ಈ ವರ್ಷ ರಿಪೇರಿ ಮಾಡಲೇಬೇಕು. ಆದರೆ ನೋಡು, ಶೆಟ್ಟರು ಸದ್ಯ ಚಿಕ್ಕಾಸೂ ಬಿಡುವಂತಿಲ್ಲ. ಮತ್ತೇನು ಮಾಡಬಹುದು?'

"ಊರವರ ಸಹಾಯ..."

"ಅದು ಇದ್ದೇ ಇದೆ ಎನ್ನುವ. ಆದರೂ ನನಗೊಂದು ನಿನ್ನೆ ರಾತ್ರಿ ಉಪಾಯ ಹೊಳೆಯಿತು. ಒಬ್ಬರಿಗಿಂತ ಇಬ್ಬರು ಮೇಲು ಎಂಬಂತೆ ನಿನ್ನನ್ನು ಕೇಳುವ ಎಂದು ಕರೆದೆ. ಹೇಗೂ ದೇವರಿಗೆ ಉಣಿಸುವವನು ನೀನೇ ಆಗಿದ್ದಿ ತಾನೆ?" ಎಂದು ಪ್ರಸಂಗಕ್ಕೆ ಬಂದರು ರಾಮಭಟ್ಟರು.

"ತಮ್ಮ ಅಪ್ಪಣೆಯನ್ನು ಪಾಲಿಸಲು ಸಿದ್ಧ...."

"ನೋಡು ವ್ಯಾಸ, ನಮ್ಮ ಅತ್ತೆ ಹೇಳುತಿದ್ದ ಕಥೆ. ಮಂದಿರದ ಕಲ್ಲಸುತ್ತಿನಲ್ಲಿ ಹಾವು ಇದೆಯಂತೆ. ಅದನ್ನು ಮಾರಿ ಉಪಯೋಗಿಸಿದರೆ ಹೇಗೆ?" ಎಂದ ರಾಮಭಟ್ಟರು ವ್ಯಾಸನ ಮುಖ

ವನ್ನು ಓರೆಗಣ್ಣಿಂದ ನೋಡಿದರು. ಪಾಪ ವ್ಯಾಸನ ಎದೆಯಲ್ಲಿ ಎಂಟು ಒನಕೆಗಳ ಬಡಿದಾಟವು ನಡೆಯಿತು. ಆದರೂ ತನ್ನ ದೇಶಾವರ ನಗೆ ನಗುತ್ತ "ಇದೆಯಂತೆ; ಆದರೆ ನೋಡಿದವರು ಯಾರು? ಅಲ್ಲದೆ ನಿಧಾನಗಳನ್ನು ಬೆಂತರಗಳು ಕಾಯುತ್ತವಂತೆ. ಅದನ್ನೆಲ್ಲಾ ತೆಗೆಯುವವರು ಬೇಕಲ್ಲಾ? ಇನ್ನು ಅದೆಷ್ಟೋ ವರ್ಷಗಳ ಹಿಂದೆ ಹಾಕಿಟ್ಟಿದ್ದ ಆ ತಾಮ್ರ ಈಗಲೂ ಹಾಗೆಯೇ ಇದೆ ಎಂದು ಹೇಳುವುದು ಸಾಧ್ಯವೆ? ಅವರೆಷ್ಟು ಇಟ್ಟಿದ್ದರೋ ಇವರೆಷ್ಟು ಹೇಳಿದರೋ!"ಎಂದರು.

"ಅದೆಲ್ಲ ಸರಿಯೇ. ಆದರೂ ಅದರಲ್ಲಿ ತಾಮ್ರವಿದೆಯಲ್ಲಾ. ಅದನ್ನು ಇಂದು ಹೊರಗೆ ಹಾಕಿಸಬೇಕು. ಶೆಟ್ಟರನ್ನೂ ಬರಹೇಳುವ. ಎಷ್ಟಿದೆ ಎಂದಾದರೂ ಗೊತ್ತಾದೀತು. ಈಗ ಹೋಗು, ಪೂಜೆಗೆ ಹೊತ್ತಾಯಿತು ತಾನೆ?"

"ಸರಿ, ನಾನಿನ್ನು ಮಿಾಯಲು ಹೋಗಲೆ?" ಎಂದು ಅನುಮತಿ ಯಾಚಿಸಿದ ವ್ಯಾಸ ಭಟ್ಟರ ಕಳ್ಳ ಮನಸ್ಸಿನ ಸುಳಿವು ಹೊರಪಡದಿರಲಿಲ್ಲ.

ಎಲೆಯಡಿಕೆ ಜಗಿಯುತ್ತ ರಾಮಭಟ್ಟರು ನಾಲ್ಕು ಕೂಗಳತೆಯಲ್ಲಿದ್ದ ಶೆಟ್ಟರ ಮನೆಯನ್ನು ಮುಟ್ಟಿದರು. ತಮ್ಮಲ್ಲಿಗೆ ಬಂದ ಭಟ್ಟರನ್ನು ಗೌರವಾದರದಿಂದ ಬರಮಾಡಿ ಕುರ್ಚಿಯಲ್ಲಿ ಕೂರಿಸಿ ಎಳನೀರು ತೆಗೆಯಿಸಲು ಹೇಳಿ ತಾನೂ ಕುಳಿತುಕೊಂಡರು ಶೆಟ್ಟರು. ಉಭಯ ಕುಶಲೋಪರಿಯಾದ ತರುವಾಯ ಭಟ್ಟರು ತಾನು ಕೇಳಿದ ವಿಚಾರವನ್ನು ಪಿಸು ಮಾತಿನಲ್ಲಿ ತಿಳಿಸಿದರು. ಆದರೆ, ಶೆಟ್ಟರು ಆದಕ್ಕೆ ಹೆಚ್ಚಿನ ಮಹತ್ವವಿತ್ತಂತೆ ಅನಿಸಲಿಲ್ಲ. "ಭಟ್ಟರೆ, ನಮಗೀಗ ದೇವಾಲಯದ ಬಗ್ಗೆ ವಿಶೇಷ ಆಸಕ್ತಿಯಿಲ್ಲ, ನಮ್ಮ ಕುಟುಂಬದವರು ವರ್ಷಕ್ಕೆ ರೂ. ೨೦೦ ಇದಕ್ಕಾಗಿ ತೆಗೆದಿರಿಸಿದ್ದಾರೆ. ಅದು ದೈನಂದಿನ ಕಾರ್ಯಕ್ಕೇನೇ ಸಾಕಾಗುವುದಿಲ್ಲವೆನ್ನುವಾಗ, ಮುಂದಿನ ಕತೆಯೇನು? ಆದರೂ ನೋಡಿ, ದೇವರ ತಾಮ್ರ ಇತ್ತು ಎನ್ನುತ್ತಾರೆ; ನಾನೂ ನೋಡಿಲ್ಲ; ಕೇಳಿದ್ದು ಮಾತ್ರ. ಅಷ್ಟರಿಂದಲೇ ಆಗುವುದಾದರೆ, ನನ್ನಿಂದ ಅಭ್ಯಂತರವಿಲ್ಲ. ನೀವೇ ಈ ಕಾರ್ಯಕ್ಕೆ ಇಳಿದು ಮುನ್ನಡೆಸಿಕೊಂಡು ಹೋಗಿ ನನಗಂತೂ

ಪ್ರಾಯವಾಯಿತು” ಎಂದು ಮುಕ್ತೇಸರಿಕೆಯನ್ನೇ ಬಾಯ್ಮಾತಿನಲ್ಲಿ ಇವರ ಕುತ್ತಿಗೆಗೆ ಕಟ್ಟಿಬಿಟ್ಟರು.

ಪೇಚಿನಲ್ಲಿ ಬಿದ್ದಂತಾದ ಭಟ್ಟರು ಆ ಮಾತನ್ನು ಅಲ್ಲಿಯೇ ಬಿಟ್ಟು “ಇಂದು ಸಂಜೆ ಒಳಗಿನ ತಾಮ್ರವನ್ನು ಹೊರ ಹಾಕುವ ಆಗದೆ? ಊರ ನಾಲ್ವರು ಹಳೆಯರನ್ನೂ ಕರೆತರುವ. ಸತ್ಯ ಸಂಗತಿ ತುಸುವಾದರೂ ಹೊರಪಟ್ಟೀತು” ಎಂದು ಪೀಠಿಕೆ ಹಾಕಿದರು. “ಆದೀತು. ಮೂರು ಘಂಟೆಯ ಹೊತ್ತಿಗೆ ಬರುತ್ತೇನೆ. ಬೇರೆ ಮನೆಗೆ ಕಳಿಸಲು ನಮ್ಮ ಸುಬ್ಬನನ್ನು ಕರೆದುಕೊಂಡು ಹೋಗಿ ಆಗದೇ” ಎಂದು ಸವಿಮಾತಾಡಿ ಆಳನ್ನು ಕರೆದು ಆತನಿಗೆ ರಾಮ ಭಟ್ಟರೆಂದಂತೆ ನಡೆಯಲು ಆಜ್ಞಾಪಿಸಿದರು.

“ನಾನು ಬರುತ್ತೇನೆ ಹಾಗಾದರೆ...”ಎಂದು ಭಟ್ಟರು ಕೈ ಮುಗಿದು ಎದ್ದು ನಿಂತರು. ಸೆಟ್ಟರೂ ಪ್ರತಿ ನಮಸ್ಕಾರ ಗೈದು ಮಂದಹಾಸ ಬೀರುತ್ತ ಹೊರ ಬಾಗಿಲ ತನಕ ಬಂದು ಬೀಳ್ಕೊಟ್ಟರು.

ಭಟ್ಟರು ಶೆಟ್ಟರ ಮಾತಿನಲ್ಲಿ ಊರ ಪ್ರಮುಖರಾದ ಸೀನ ಸೆಟ್ಟಿ, ಅನಂತಾಚಾರಿ, ಜನಾರ್ದನಯ್ಯ ಮೊದಲಾದವರಿಗೆ ದೇವಾಲಯಕ್ಕೆ ಬರಲು ಹೇಳಿ ಕಳಿಸಿದರು. ಎಂದೋ ಆಗ ಬೇಕಾಗಿದ್ದ ಜೀರ್ಣೋದ್ಧಾರ ಕಾರ್ಯ ಇಂದಾದರೂ ಆಗುವುದಲ್ಲಾ ಎಂದು ಹಿಗ್ಗಿದವನೆಂದರೆ ಯಮನೂರಿಗೆ ಹತ್ತಿರದವನಾದ ಅನಂತಾಚಾರಿ ಮಾತ್ರ. ಆ ಗರ್ಭಗುಡಿಯೊಳಗಿನ ಕಲ್ಲು ಸುತ್ತಿನಲ್ಲಿ ತಾಮ್ರ ಹಾಕಿದುದನ್ನು ಕಂಡವನು ಅವನೊಬ್ಬನೇ ಅಂತೆ! ಆಗ ಆತನಿಗೆ ಆರೋ, ಏಳೋ ವರ್ಷ ಪ್ರಾಯವಾಗಿದ್ದಿರಬಹುದಂತೆ! ಆ ಸಣ್ಣ ಪ್ರಾಯದಲ್ಲಿ ಏನು ಅರಿತಿದ್ದನೆಂಬುದು ಆತನಿಗೇನೇ ಅರಿಯದು. ಆದರೂ ಹಳೆಯ ಹುಲಿಯೆಂಬ ಅಭಿಮಾನ ಆತನಿಗೆ ಮಾತ್ರವಲ್ಲ ರಾಮ ಭಟ್ಟರಿಗೂ ಇತ್ತು

ಅಪರಾಹ್ನದ ಸಮಯ ಭಗವಾನ್ ಭಾಸ್ಕರ ಪಡುದಿಗಂಗನೆಯ ಮನೆಯತ್ತ ತೀವ್ರವಾಗಿ ಓಡುತಿದ್ದ. ಊರ ಪ್ರಮುಖರು ದೇವಾಲಯದ ಅಂಗಳದಲ್ಲಿ ಒಟ್ಟು ಸೇರಿದರು. ಆದರೆ, ವ್ಯಾಸ ಭಟ್ಟರ ಸವಾರಿಯಿನ್ನೂ ಚಿತ್ತಯಿಸಲಿಲ್ಲ. ನಿಧಾನವಾಗಿ ತಾಂಬೂಲ ಜಗಿಯುತ್ತ

ತಿಮ್ಮಣ್ಣ ಶೆಟ್ಟರು ಕೇಳಿದರು: "ಭಟ್ಟರೆ, ಊರ ಹತ್ತು ಸಮಸ್ತರು ಬಂದಂತಾಯ್ತು. ಇನ್ನು ತಡೆಯುವ ಆಗತ್ಯವಿಲ್ಲ; ಯಾರೂ ಬರುವಂತೆ ಕಾಣಿಸುವುದಿಲ್ಲ. ಆದುದರಿಂದ ನಮ್ಮ ಕಾರ್ಯಕ್ಕೆ ಕೈಹಾಕಬಹುದಲ್ಲ?" ಇದಕ್ಕೆ ಎಲ್ಲರೂ ಒಪ್ಪಿದಂತೆ ಕಂಡಿತು. ಭಟ್ಟರು ಒಂದು ಬಾರಿ ಸುತ್ತ ನೋಡಿದರು. ವ್ಯಾಸ ಭಟ್ಟರ ಸುಳಿವು ಎಲ್ಲೂ ಹತ್ತಲಿಲ್ಲ. ಅನಂತಾ ಚಾರಿ ಇದನ್ನು ಗಮನಿಸಿಯೇ ಎಂಬಂತೆ ಕೇಳಿಯೇ ಬಿಟ್ಟ—"ಭಟ್ಟರೇ, ನಮ್ಮ ವ್ಯಾಸ ಭಟ್ಟರು ಕಾಣುವುದಿಲ್ಲವಲ್ಲ? ನನ್ನ ದೃಷ್ಟಿಗೆ ಮಾತ್ರವೇ ಅಥವಾ ನಿಜವಾಗಿಯೂ ಬಂದಿಲ್ಲವೆ?"

ರಾಮು ಭಟ್ಟರು "ನಾನೂ ಅವನನ್ನೇ ಎದುರು ನೋಡುತ್ತಿದ್ದೆ. ಇಲ್ಲ ಆತನೇನೋ ನುಣುಚಿಕೊಳ್ಳುವಂತೆ ತೋರುತ್ತದೆ. ಇಲ್ಲವಾದರೆ..." ಎಂದು ತಲೆ ತುರಿಸಿಕೊಳ್ಳತೊಡಗಿದರು, ತಿಮ್ಮಣ್ಣ ಶೆಟ್ಟರ ಅಪೇಕ್ಷೆಯಂತೆ ಆಳನ್ನಟ್ಟಿದಾಗ, ಅವರು ಪೇಟೆಗೆ ಹೋಗಿದ್ದಾರೆಂದು ತಿಳಿಯಿತು. ರಾಮು ಭಟ್ಟರೂ ಮುಕ್ತೇಸರ ಸೆಟ್ಟರಿಗೂ ಇದ್ದ ಸಂದೇಹ ಬಲವಾಗ ತೊಡಗಿತು. ಇನ್ನು ತಡೆಯುವುದು ಸಾಧ್ಯವೆ? ಯಾರು ಕಲ್ಲ ಸುತ್ತಿಗೆ ಹೋಗುವುದೆಂದು ಪಿಸು ಮಾತು ತೊಡಗಿತು. ಪಾತಾಳಿ ಪರಮೇಶ್ವರನೇ ಸರಿ ಎಂಬ ತೀರ್ಮಾನಕ್ಕೆ ಬಂದು ಅವನನ್ನು ಮುಂದಿಟ್ಟು, ತಾಮ್ರ ತರಲು ಹೋದವರು ಅಲ್ಲಿ ಕಂಡುದೇನು? ಮಣ್ಣಿನ ದೊಡ್ಡ ರಾಶಿ! ಇಲ್ಲದೆಂಬುದಕ್ಕೆ ತಾಮ್ರದ ಚೂರುಪಾರುಗಳನ್ನು ಕೂಡಿಸಿ ಹೊರಗೆ ತಂದರೆ, ನಾಲ್ಕಾರು ಮಣಕ್ಕಿಂತ ಹೆಚ್ಚಿನದಿರಲಿಲ್ಲ! ಅನಂತಾಚಾರಿಗೆ ಇದನ್ನು ಕಂಡು ಹೃದಯಸ್ತಂಭನವಾಗದಿದ್ದುದು ಊರವರ ಪುಣ್ಯ. "ಅಯ್ಯಾ, ನಾನು ಹೇಳುತ್ತೇನೆ. ಕಡಿಮೆ ಪಕ್ಷ ೫೦—೬೦ ಮಣದಷ್ಟಾದರೂ ಇತ್ತು. ಕಲ್ಲಸುತ್ತಿನಲ್ಲಿ ತುಂಬ ಇದ್ದುದನ್ನು ಕಂಡಿದ್ದೇನೆ. ಅಲ್ಲಿ ಈಗ ಹೊಸ ಮಣ್ಣು ಇರಬೇಕಾದರೆ, ಏನೋ ಆಗಿರಲೇಬೇಕು. ಯಾರೋ ದೇವಸ್ವವನ್ನು ಅಪಹರಿಸಿ, ದೇವರ ಕಣ್ಣಿಗೆ ಮಣ್ಣೆರೆಚಲು ಹವಣಿಸಿದಂತೆ ತೋರುತ್ತದೆ. ಅಂತಹ ದುಷ್ಟವಂಚಕನಿಗೆ ತಕ್ಕ ಶಾಸ್ತಿಯನ್ನು ಮಾಡಲೇಬೇಕು". ಎಂದು ಬಿಗಿ ಆಡಿದ.

"ತಾಮ್ರವು ಕಾಣೆಯಾದುದಕ್ಕೂ ವ್ಯಾಸ ಭಟ್ಟರು ಬಾರದಿದ್ದು

ದಕ್ಕೂ ಏನಾದರೂ ಸಂಬಂಧವಿರಬಹುದೆ? ಅವರನ್ನು ಸಂಪೂರ್ಣ ನಂಬುವುದು ಕಷ್ಟ" ಸೀನ ಸೆಟ್ಟರು ಬಾಯಿ ಹಾಕಿದರು. ಹೀಗೆಯೇ ಒಬ್ಬೊಬ್ಬರು ಒಂದೊಂದು ರೀತಿಯಾಗಿ ವ್ಯಾಸ ಭಟ್ಟರನ್ನು ಬೊಟ್ಟು ಮಾಡಿದಾಗ, ತಿಮ್ಮಣ್ಣ ಸೆಟ್ಟರು, ರಾಮ ಭಟ್ಟರ ಸನ್ನೆಯರಿತು ಮಾತಿಗೆ ತೊಡಗಿದರು. ವ್ಯಾಸ ಭಟ್ಟರ ಬಗ್ಗೆ ಇದುವರೆಗೆ ತಿಳಿದು ಬಂದ ಸಂಗತಿಗಳನ್ನು, ಅದಕ್ಕಾಗಿಯೇ ಇಂದಿನ ಸಭೆ ಸೇರಿದುದನ್ನು ವಿಶದವಾಗಿ ತಿಳಿಸಿ, ಮುಂದೇನು ಮಾಡಬೇಕೆಂದು ಪ್ರಶ್ನಿಸಿದರು. ವ್ಯಾಸ ಭಟ್ಟರನ್ನು ಮುಂದಿಟ್ಟು ಅವರೊಡನೆ ಕೇಳಿ ತಿಳಿದುಕೊಳ್ಳಬೇಕೆಂದು ಒಮ್ಮತದಿಂದ ನಿರ್ಧರಿಸಲಾಯ್ತು.

ಮರುದಿನ ಮುಂಜಾನೆ ವ್ಯಾಸ ಭಟ್ಟರ ಮನೆ ಬಾಗಿಲಲ್ಲಿ ಸಮಸ್ತರೆಲ್ಲರೂ ಸೇರಿದರು, ನಾನಾಪರಿಯಾಗಿ ಅವರ ಬಾಯಿ ಬಿಡಿಸಲು ಪ್ರಯತ್ನಿಸಿದರು. ಮೆತ್ತಗೆಯ ಮಾತುಗಳಿಗೆ ಬಗ್ಗದಿರಲು ಗದರಿಕೆಯ ಬೆದರಿಕೆಯ ಮಾತುಗಳು ಹೊರಟವು. ಅಂತೂ ತಾನು ಒಂದು ಆರು ಮಣ ಮಾರಿದದು ದಿಟವೆಂದೂ ಅದರ ಮೌಲ್ಯವನ್ನು ಕೊಡುವೆನೆಂದೂ ಆದರೆ, ತನ್ನೊಡನೆ ಸದ್ಯ ಹಣವಿಲ್ಲದುದರಿಂದ ನೋಟು ಬರೆದು ಕೊಡುವುದೆಂದೂ ತಿಳಿಸಿದರು, ಸಮಸ್ತರಿಗೆ ಏನೂ ಸಮಾಧಾನವಾದಂತಾಗಲಿಲ್ಲ. ಕಾಣೆಯಾದುದು ೫೦ ಮಣ — ಮಾರಿದುದು ೬ ಮಣ ಮಾತ್ರ! ಉಳಿದುದು ಎಲ್ಲಿಹೋಯಿತು? ಎಲ್ಲರೂ ಒಂದುಸೇರಿ ಪೋಲೀಸು ಕಂಪ್ಲೈಂಟ್ ಕೊಡುವುದಾಗಿ ಬೆದರಿಕೆ ಹಾಕಿದರು. ಆದರೆ, ಕೋರ್ಟು ಕಛೇರಿಗಳ ಮೆಟ್ಟಲು ತುಳಿದು, ಫೂಟ್ ಲಾಯರ್ ಆಗಿ ಪಳಗಿದ ವ್ಯಾಸ ಭಟ್ಟರು ಇದಕ್ಕೆ ಭಯ ಪಡಲಿಲ್ಲ. "ನೀವು ಏನು ಬೇಕಾದರೂ ಮಾಡಿ, ಇದ್ದುದನ್ನು ಇದ್ದಂತೆ ಹೇಳಿದ್ದೇನೆ. ನಾನು ಮಾಡಿದುದು ತಪ್ಪು ಎಂಬುದನ್ನು ಒಪ್ಪಿದ್ದೇನೆ. ಏನೋ ತುಸು ಗರ್ಜಿ ಬಿತ್ತು; ಉಪಯೋಗಕ್ಕೆ ಬಾರದ ಸೊತ್ತು; ಬೇಕಾದಾಗ ಕೊಡೋಣವೆಂದು ತೆಗೆದೆ. ನಾನಾಗಿಯೇ ಹೇಳಬೇಕೆಂತ ಇದ್ದೆ, ಆದರೆ, ಅದಕ್ಕೆ ಮೊದಲೇ ನೀವು ಕೇಳಿದಿರಿ. ಇನ್ನು ನೀವು ಇಷ್ಟಕಂಡಂತೆ ಮಾಡಿ" ಎಂದು ಖಂಡಾ ಖಂಡಿತವಾಗಿ ಹೇಳಿದರು.

ಹೋದವರೆಲ್ಲರೂ ಏನು ಮಾಡುವುದೆಂದು ತಿಳಿಯದೆ ತಮ್ಮ ತಮ್ಮಲ್ಲೆ ಮಾತಾಡಿಕೊಳ್ಳುತ್ತ ಮರಳಿದರು. ಮುಂದೆ, ವಿಚಾರಿಸಿದಾಗ ದೇವಾಲಯದಲ್ಲಿ ತಾಮ್ರವಿದ್ದ ಬಗ್ಗೆ ದಾಖಲೆಯೇ ಇಲ್ಲವಾದುದರಿಂದ, ಇದ್ದುದನ್ನು ನೋಡಿದವರು ಕೆಲ ಮಂದಿಯಾದರೂ ಇಲ್ಲವಾದುದರಿಂದ ಮೊಕದ್ದಮೆ ಹೂಡಿದರೆ, ಸಾರ್ಥಕವಾಗದು ಎಂದು ತಿಳಿಯಿತು. ಭಾಷೆ ಮಾತು ದೃಷ್ಟಿಗಳಿಗೆ ಪ್ರಾಧಾನ್ಯವಿದ್ದ ಕಾಲದ ತಾಮ್ರಕ್ಕೆ ಲಿಖಿತ ದಾಖಲೆಯ ಈ ಯುಗದಲ್ಲಿ ಅಸ್ತಿತ್ವವಿಲ್ಲವೆನ್ನುವುದೂ ಸಿದ್ಧವಾಯಿತು. ಬಂದದ್ದಾದರೂ ಬರಲಿ ಎಂದು ವ್ಯಾಸ ಭಟ್ಟರ ಮಾತಿನಂತೆ ಅವರೊಪ್ಪಿದ್ದಕ್ಕೆ ನೋಟನ್ನಾದರೂ ಬರೆದುಕೊಳ್ಳುವ ಎಂದರೆ, ಅವರು ಮತ್ತೂ ಬುದ್ಧಿವಂತರಾಗಿದ್ದರು. ತಾಮ್ರದ ಕಥೆಯೇ ತನಗೆ ತಿಳಿದಿಲ್ಲವೆಂಬಂತೆ ಅವರು ಸಂಪೂರ್ಣ ನಿರಪರಾಧಿತನವನ್ನೇ ರುಜುಪಡಿಸ ಹೊರಟರು. ಇನ್ನೂ ಕೀಟಲೆ ಕೊಡುವುದಾದರೆ, ಮಾನನಷ್ಟ ಧಾವೆ ಮಾಡುವುದಾಗಿ ಬೆದರಿಸಿದರು. ಅಂತೂ ಇದ್ದಿತೆಂದು ಹೇಳಲಾದ ತಾಮ್ರ ಇಲ್ಲವೆಂದಾಗುವುದಕ್ಕೆ ಕಾರಣರಾರೆಂದು ತಿಳಿದೂ ಜನತೆ ದೇವರು ನೋಡಿಕೊಳ್ಳುತ್ತಾನೆ ಎಂದು ಕೈಕಟ್ಟಿ ಕೂರಬೇಕಾಯ್ತು.

ನಡೆದ ತಾಮ್ರ ಪ್ರಕರಣದಿಂದ ವಿಚಿಂತೆ ಗೀಡಾದವರೆಂದರೆ ರಾಮು ಭಟ್ಟರು ಮಾತ್ರ. ಅವರಾದರೂ ಮಾಡುವುದೇನು? ಅಪರಾಧ ತನ್ನದೇ. ವ್ಯಾಸಭಟ್ಟರ ಬಗ್ಗೆ ಅವರಿಗೆ ಮೊದಲೂ ಸದಭಿಪ್ರಾಯವಿತ್ತು ಎಂಬುವಂತಿಲ್ಲ. ಆದರೂ ದೇವಾಲಯದಲ್ಲಿ ಏನಿದೆ? ಎಂಬ ಭಾವನೆಯಿಂದ ಆತನನ್ನು ಪೂಜೆಗೆ ಕರೆದಿದ್ದರು. "ಅಂತೂ ಆತ ತನ್ನ ಹೆಸರಿಗೇನೇ ಕಲಂಕ ಸವರಿದ; ನನ್ನ ಕರ್ತವ್ಯದ ಭಾರವನ್ನು ಅನ್ಯರ ತಲೆ ಮೇಲೆ ಹೇರಿದರೆ ಆಗುವುದು ಹೀಗೇ" ಎಂದು ರಾಮುಭಟ್ಟರೆಂದು ಕೊಂಡರು.

"ವ್ಯಾಸ, ನಿನ್ನಿಂದ ನನಗೆ ಬಹಳ ಉಪಕಾರವಾಯ್ತು. ಮಿಲ್ಲಿನಲ್ಲಿ ಯಾರನ್ನಾದರೂ ಕೂರಿಸಿದರೆ ವ್ಯವಹಾರ ನಡೆಯದು ಎಂದು ನಾನೇ ಕುಳಿತೆ. ಇಲ್ಲಿ ಅಂತಹ ವ್ಯವಹಾರವಿಲ್ಲವೆಂದು ನಿನ್ನನ್ನು ನಂಬಿದೆ. ನಿಜವಾಗಿಯೂ ನೀನು ನನಗೆ ಕರ್ತವ್ಯದ ಪಾಠವನ್ನು ಕಲಿಸಿದೆ! ಈಗ, ನಿನ್ನ ಕೆಲಸವಾಯಿತು. ನನ್ನ ಗುರುವೆನಿಸಿದ ನಿನಗೆ ಇದೋ ಗುರುಕಾ

ಣಿಕೆಯಾಗಿ ಹತ್ತು ಕ್ರೊಲು ಗದ್ದೆ ನಿನ್ನ ಹೆಸರಿಗೆ ಬರೆಯುತ್ತೇನೆ. ಇನ್ನು ನೀನು ಹೋಗಬಹುದು. ನನ್ನ ಅಪರಾಧಕ್ಕೆ ತಕ್ಕಂತೆ ಶಿಕ್ಷೆ ಈಗಲೇ ನನಗೆ ಸಿಕ್ಕಿತು. ಊರವರನ್ನು ತಲೆಯೆತ್ತಿ ನೋಡುವ ಭಾಗ್ಯ ದೂರ ವಾಯಿತು. ಇನ್ನು ಏನಾದರೂ ಅಪರಾಧವೆಸಗಿದ್ದರೆ ಉಮಾಮಹೇಶ್ವ ರನು ಕ್ಷಮಿಸಲಿ" ಎಂದು ಕಣ್ಣೊರಸಿಕೊಂಡರು. ವ್ಯಾಸ ಭಟ್ಟರ ಕಂಗ ಗಳಲ್ಲಿಯೂ ನೀರೊಸರುವಂತಿತ್ತು; ಆದರೆ, ತತ್‌ಕ್ಷಣ ಅವರು ಅಲ್ಲಿ ನಿಲ್ಲದೆ ಹೊರಟು ಹೋದುದರಿಂದ ಅವರ ಅರಿದೆರೆದ ಹೃದಯದ ಬಾಗಿಲು ತಿರುಗಿ ಮುಚ್ಚಿತು.

o o o o o

ಸುಮಾರು ಎಂಟು ವರ್ಷಗಳೇ ಕಳೆದುವು. ರಾಮಭಟ್ಟರ ಮುಪ್ಪು ಬಂದಾಯಿತು.ಅವರು ಮನೆ-ದೇವಸ್ಥಾನಗಳ ವರೆಗೆ ಮಾತ್ರ ಪಾದಯಾತ್ರೆ ಬೆಳೆಸುತಿದ್ದರು. ಒಂದು ದಿನ ಅವರು ಮನೆ ಚಾವಡಿಯಲ್ಲಿ ಕುಳಿತಿದ್ದಾಗ, ತಿಮ್ಮಣ್ಣ ಶೆಟ್ಟರ ಆಳು ಬಂದು, "ಅಯ್ಯಾ, ಯಜಮಾನರಿಗೆ ದೇವರ ತೀರ್ಥ ಬಿಡಬೇಕಂತೆ....ಕಿರಿ ಯಜಮಾನರು ಹೇಳಿದರು" ಎಂದು ವಿನಂತಿ ಸಿದ. ಮುಕ್ತೇಸರರು ಜಡ್ಡು ಬಿದ್ದು ಬಹುದಿನವಾಗಿತ್ತು. ಈಕ್ಷಣ— ಮರುಕ್ಷಣವೆಂಬಂತೆ ಅವರ ಪ್ರಾಣ ಪಕ್ಷಿ ಜೀವನ ಮರಣಗಳೊಡನೆ ಹೊಯ್ದಾಡುತಿತ್ತು. ಭಟ್ಟರು ತಡ ಮಾಡದೆ ದೇವಾಲಯಕ್ಕೆ ತೆರಳಿ, ಪ್ರಾರ್ಥನೆ ಸಲ್ಲಿಸಿ ತೀರ್ಥದ ಕೌಳಿಗೆ ಹಿಡಿದು ಶೆಟ್ಟರ ಮನೆ ಮುಟ್ಟಿದರು. ನಿಶ್ಚೇಷ್ಟಿತರಾಗಿ ಮಲಗಿದ್ದ ಶೆಟ್ಟರು ಭಟ್ಟರ ಆಗಮನವನ್ನೇ ಪ್ರತೀಕ್ಷಿಸು ತ್ತಿದ್ದಂತೆ ಕಂಡಿತು. ಭಟ್ಟರು ಹತ್ತಿರ ಹೋಗಿ ಮಂತ್ರ ಹೇಳಿ ಒಂದು ಸೌಟು ತೀರ್ಥ ಬಾಯಿಗೆ ಸುರಿದರು. ಅದನ್ನು ಕುಡಿದ ಶೆಟ್ಟರು ದೇವಾ ಲಯದತ್ತ ಕೈಸನ್ನೆ ಮಾಡಿ ತಮ್ಮ ಹಣೆಯನ್ನು ಮುಟ್ಟಿಕೊಂಡರು— ಎಲ್ಲವೂ ನನ್ನ ಅದೃಷ್ಟವೆಂಬಂತೆ ಶೆಟ್ಟರ ಕಳವಳವನ್ನು ಊಹಿಸಿದ ಭಟ್ಟರು, "ಶೆಟ್ಟರೆ, ದೇವರು ಇದ್ದಾನೆ ಎಂಬುದು ನಿಜ ತಾನೆ? ಇಲ್ಲ ವಾದರೆ, ಆ ವ್ಯಾಸ ಹೀಗೆ ಏಕಾಗುತ್ತಾನೆ? ದೇವಸ್ವವನ್ನು ಅಪಹರಿಸಿ ದವ ಎಂದಿಗೂ ಸುಖ ಭೋಗಿಸಲಾರ. ಇಂದು ಆತ ಎಲ್ಲವನ್ನೂ ಅರಳಿ ಧಾರಣೆಯಲ್ಲಿ ಕಳೆದುಕೊಂಡು ಏಕಾಕಿಯಾಗಿ ತಿರುಪೆಯೆತ್ತುವಂತಾ

ಯಿತು. ಹೆಂಡತಿಯೇನೋ ಮುತ್ತೈದೆಯಾಗಿ ಕಣ್ಣು ಮುಚ್ಚಿದಳು, ಇಲ್ಲವಾದರೆ ಇದನ್ನೆಲ್ಲ ಯಾರು ನೋಡಬೇಕು?" ಎಂದರು.

ಶೆಟ್ಟರು ಹೌದು ಎನ್ನುವಂತೊಮ್ಮೆ ಉಸಿರು ಬಿಟ್ಟರು. ಅವರು ಆಗ ಬಿಟ್ಟ ಉಸಿರೇ ಕಡೆಯದಾಯಿತು. ಆ ಕ್ಷಣದಲ್ಲಿಯೇ ಜನರ ಗುಂಪನ್ನು ಭೇದಿಸುತ್ತ ಓರ್ವ ಮುದಿಯ ನುಗ್ಗಿಬಂದ. "ಸೆಟ್ಟರೇ, ನಾನು ಮಾಡಿದುದು ಸರ್ವಾಪರಾಧವಾಯ್ತು; ನನ್ನನ್ನು ಕ್ಷಮಿಸಿಬಿಡಿ. ನನ್ನನ್ನು ಕ್ಷಮಿಸಿಬಿಡಿ. ಉಂಡ ಮನೆಗೆರಡು ಬಗೆದ ಪಾಪಿ ನಾನು. ನನ್ನ ತಪ್ಪಿಗೆ ಉಮಾಮಹೇಶ್ವರ ಶಿಕ್ಷೆಕೊಟ್ಟ; ನಾನೂ ಅನುಭವಿಸುತಿದ್ದೇನೆ ನೀವು ದೇವರ ಪ್ರತಿನಿಧಿಯಾಗಿ ಕ್ಷಮಿಸಿದ್ದೇನೆ ಎನ್ನಿ, ಆಗ ಸುಖದಿಂದ ಸಾಯುತ್ತೇನೆ" ಎಂದು ಕಳೇಬರದ ಕಾಲಿಗೆ ಬಿದ್ದ. ಇದನ್ನೆಲ್ಲಾ ಅನತಿದೂರದಲ್ಲೇ ನೋಡುತಿದ್ದ ರಾಮ ಭಟ್ಟರು ಮೃತ ಶೆಟ್ಟರ ಮುಖದಲ್ಲಿ ಅಪೂರ್ವ ತೇಜಸ್ಸೊಂದು ತೋರಿ ಮಾಯವಾದಂತೆ ಕಂಡರು. ನಿಜವಾಗಿಯೂ ಮಾಡಿದ ತಪ್ಪಿಗೆ ಪಶ್ಚಾತ್ತಾಪವೇ ಪ್ರಾಯಶ್ಚಿತ್ತವೆಂಬುದಕ್ಕೆ ಬೇರೆ ನಿದರ್ಶನ ಬೇಡವೆಂದವರು 'ವ್ಯಾಸ' ಎಂದು ಆತನನ್ನು ಎತ್ತಿದರು. "ಅಣ್ಣಾ" ಎಂದ ಆ ವ್ಯಕ್ತಿ ಭಟ್ಟರನ್ನು ಬಿಗಿಯಾಗಿ ಅಪ್ಪಿತು. ಇದನ್ನು ನೋಡುತ್ತ ನಿಂತವರು ನೋಡುತ್ತಲೇ ನಿಂತರು.

## ೨ ತೈಲವಿಲ್ಲದ ಅಭ್ಯಂಜನ

ಉದರ ನಿರ್ವಹಣೆಗೊಂದು ಉದ್ಯೋಗವೆಂದಾಗಿರುವಾಗ ಅದು ಮನೆ ಬಾಗಿಲಲ್ಲಿ ದೊರೆಯುವಷ್ಟು ಭಾಗ್ಯಶಾಲಿ ನಾನಾಗಿರಲಿಲ್ಲ; ಪ್ರಾಯಃ ನನ್ನ ಹಿರಿಯರಾದರೂ ಅಷ್ಟು ಪುಣ್ಯಸಂಚಯ ಮಾಡಿಟ್ಟಿರಲಿಲ್ಲ. ಆದಕಾರಣದಿಂದಲೇ ಅವರ ಪ್ರೀತಿಯ ಪುತ್ರನಾದ ನಾನು ಊರು ಮನೆಬಿಟ್ಟು ಹೆಚ್ಚು ದೂರವೂ ಅಲ್ಲದ, ಸಮೀಪವೂ ಅಲ್ಲದ ಹಳ್ಳಿಯೂ ಆಗಿರದ, ನಗರವೆಂದೂ ಕರೆಯಲಾಗದ 'ಊರು' ಒಂದರಲ್ಲಿ ಪಾದಾರ್ಪಣ ಮಾಡಲೇ ಬೇಕಾಯಿತು. ಕಿಂಕರ್ತವ್ಯ ವಿಮೂಢನಾದ ನಾನು ಹೇಗೆ ಹೇಗೋ ಮಾಡಿ ಹೊಸ ವಾತಾವರಣಕ್ಕೆ ಹೊಂದಿಕೊಳ್ಳುವ ಪ್ರಯತ್ನ ಮಾಡಿದೆ; ಸಾಮಾನ್ಯವಾಗಿ ಹೇಳುವುದಾದರೆ, ಊರಿಗೆ ತಕ್ಕಂತೆ, ಬಾಳತೊಡಗಿದೆ; ಇಲ್ಲವೆಂದಾದರೆ, ನನ್ನ ಸುಖ ದುಃಖ ಹಿತ-ಅಹಿತಗಳ ಬಗ್ಗೆ ವಿಚಾರಿಸ ಬೇಕಾದವರಾದರೂ ಅಲ್ಲಿ ಯಾರಿದ್ದಾರೆ?

ಮಳೆಗಾಲದ ಬಲು ಸೋನೆಯು ಸುರಿಸುರಿದು ಮಾಯವಾಗುತ್ತ ಬರುತಿತ್ತು. ರಸ್ತೆಯಿಂದ ಅನತಿ ದೂರದಲ್ಲಿ ಕಂಗೊಳಿಸುತ್ತಿದ್ದ ಕೆಯ್ಪೊಲಗಳು ಬರೇ ಹೊಲಗಳಾಗುತ್ತ ಬರುತಿದ್ದವು. ಉರಿ-ಚಳಿಗಳ ನಡುವೆ ಬಿರುಸಿನ ತಾಕಲಾಟ ನಡೆಯತೊಡಗಿತ್ತು. ಕಾಫಿ ಹೋಟೇಲುಗಳಲ್ಲಿ ಚುರುಕಿನ ಚಟುವಟಿಕೆಯು ಕಾಣಲು ಆರಂಭವಾಗಿತ್ತು.

ನಾನು ಬಿಡಾರ ಮಾಡಿದ್ದ ಕೋಣೆಯ ಪಕ್ಕದಲ್ಲೇ ಸಾಹುಕಾರರೊಬ್ಬರ ಗೋದಾಮು. ಪ್ರತಿ ರಾತ್ರಿಯೂ ಅಲ್ಲಿ ಸಾಮಾನುಗಳು ಬರುತಿದ್ದುವು, ಮುಂಜಾವದಲ್ಲಿಯೇ ಅಲ್ಲಿಂದ ಮಾಯವಾಗುತಿದ್ದುವು. ಬಂದು ಹೋಗುವ ಹೊರೆಗಳು ಭತ್ತದ ಗೋಣಿಗಳು ಎಂದು ತಿಳಿಯಿತು. ಒಬ್ಬ ಸಾಮಾನ್ಯ ವರ್ಗದ ಸಾಹುಕಾರ ಪ್ರತಿದಿನವೂ ಒಂದೆರಡು ಲಾರಿಗ

ಆಷ್ಟು ಭತ್ತದ ವ್ಯವಹಾರ ಮಾಡುವುದು ನನಗೊಂದು ವಿಸ್ಮಯವಾ ಗಿಯೇ ಕಂಡಿತ್ತು. ಅಂತೂ ನಗರದ ಗಲಭೆಯ ವಾತಾವರಣದಲ್ಲಿ ಬೆಳೆದು ಬಂದ ನನ್ನ ಮನಸ್ಸಿಗೆ ಇವನ್ನೆಲ್ಲಾ ಹಚ್ಚಿಕೊಳ್ಳುವ ಆವಶ್ಯಕತೆ ಬಂದಿರಲಿಲ್ಲ. ಹಳ್ಳಿಯ ರೈತರು ಬಡವರು. ಏನೋ ತಮ್ಮ ಗರ್ಜಿ ಗಾಗಿ ಭತ್ತವನ್ನು ಮಾರುತಿದ್ದಾರೆ ಎಂದು ಭಾವಿಸಿ ನನ್ನಷ್ಟಕ್ಕೇ ನಾನು ಸಮಾಧಾನ ತಂದುಕೊಂಡೆ.

ದೀಪಾವಳಿಯ ಪರ್ವ ದಿನಗಳು ಸಮೀಪಿಸಿದುವು. ದುರ್ದೈವ ದಿಂದ ಆದು ಆ ವರ್ಷ ಮೂರು ದಿನ ಉಳಿಯ ಬೇಕೆ? ಸರಕಾರವು ಎರಡು ದಿನಗಳನ್ನು ಮಾತ್ರ ರಜಾ ದಿನವೆಂದು ಘೋಷಿಸಿತ್ತು. ಮೊದ ಲನೆಯ ದಿನವಂತೂ ರಜೆ ಮಾಡುವುದೇ ಅಗತ್ಯವಿತ್ತು. ಆದರೆ, ಆ ದಿನದ ಧಾರ್ಮಿಕ ಕಾರ್ಯಕ್ರಮಗಳು ಅತ್ಯಲ್ಪ ತಾನೆ? ರಾತ್ರಿ ಚಂದ್ರೋದಯದಲ್ಲಿ ತೈಲಾಭ್ಯಂಗ ಮಾಡುವುದು! ನ್ಯಾಯವಾಗಿ ಹೇಳು ವುದಾದರೆ, ಅಂದು ಯಾವ ಕೆಲಸವೂ ಇಲ್ಲ. ಅಭ್ಯಂಜನ ಸ್ನಾನ ಮಾಡಬೇಕಲ್ಲ ಎನ್ನ ಬಹುದು ನೀವು. ಆದರದು ಸೂರ್ಯೋದಯದಲ್ಲಿ ಅಲ್ಲ ತಾನೆ? ಹಾಗಾಗಿ ನ್ಯಾಯ ಸತ್ಯ ಪಕ್ಷಪಾತಿಯೆಂದು ಹೇಳಿಕೊ ಳ್ಳುವ ನಾನು ಕೆಜುವಲ್ ರಜೆ ಬರೆಯುವುದು ಆ ಕಾರಣಕ್ಕೆ ಸಾಧ್ಯವಿಲ್ಲ. ಹೀಗಾಗಿ ತುಂಬ ಯೋಚನೆಯಲ್ಲಿ ಬಿದ್ದೆ. ತೈಲಾಭ್ಯಂಜನ ಮಾಡದೆ ಗತ್ಯಂತರವೂ ಉಳಿಯಲಿಲ್ಲ. ಸಂಪ್ರದಾಯಸ್ಥರ ಮನೆತನದಲ್ಲಿ ಹುಟ್ಟಿ ಬೆಳದು ಬಂದ ಮೇಲೆ ಅದನ್ನು ಬಿಟ್ಟು ಬಿಡುವುದು ಸಾಧ್ಯವೂ ಇರ ಲಿಲ್ಲ

ಸುಧಾರಕರು ಪ್ರಶ್ನಿಸಬಹುದು, 'ಅವೆಲ್ಲಾ ಎಂಥದು? ಬಿಡು ವಾದಾಗ ಒಂದು ದಿನ ಅಭ್ಯಂಜನ ಮಾಡಿದರಾಯಿತು' ಎಂದು. ನಾನೂ ಮೊದ ಮೊದಲಿಗೆ ಹೀಗೆಯೇ ತಾಯಿಯೊಡನೆ ವಾದಿಸು ತಿದ್ದೆ. ಆದರೆ, ಅದಕ್ಕೆ ಆಕೆಯಿತ್ತ ಉತ್ತರವಾದರೂ ಪ್ರಶ್ನಾರೂಪ ದಲ್ಲಿಯೇ ಇದ್ದಿತ್ತು. "ಕೆಲಸಕ್ಕೆ ನಿನ್ನೆ ಯಾಕೆ ಹೋದಿ? ಯಾವು ದಾದರೂ ಬಿಡುವಿದ್ದ ದಿನ ಹೋಗಬಹುದಿತ್ತು." ಇದು ಮೂಢತ ನದ ಕುತರ್ಕವೆಂದು ಯಾರಾದರೂ ಹೇಳಬಹುದು. ಆದರೆ, ಕುತ

ರ್ಕವನ್ನು ಕುತರ್ಕದಿಂದಲೇ ಗೆಲ್ಲಬೇಕಲ್ಲವೆ? ಶಠಸ್ಯಂ ಪ್ರತಿ ಶಾಠಂ ಎಂಬುದೇ ಆರ್ಯ ಸಿದ್ಧಾಂತ ತಾನೆ?

ಈ 'ಕುತರ್ಕ'ದ ಬಗ್ಗೆ ನಾನು ಒಂದು ಇಡಿ ದಿನ ತಲೆಕರಡು ಮಾಡಿಕೊಂಡಿದ್ದೆ. ಆ ದಿನವೇ ಅಭ್ಯಂಜನವೇಕೆ ಮಾಡಬೇಕು? ಇದಕ್ಕೆ ಪ್ರತಿಯಾಗಿ ನನ್ನ ಮನಸ್ಸಿನಲ್ಲಿಯೇ ಹಲವಾರು ಪೂರಕ ಪ್ರಶ್ನೆಗಳೇ ಎದ್ದುವು; ರಾತ್ರೆ ಹೊತ್ತೇ ನಿದ್ದೆಯಾಕೆ ಮಾಡಬೇಕು? ದಿನದಲ್ಲಿ ಮೂರು ಹೊತ್ತು ಯಾಕೆ ಊಟ ಮಾಡಬೇಕು? ಕಾಲುಗಳಿಂದಲೇ ನಡೆಯು ಬೇಕು ಯಾಕೆ? ಬಾಯಿಂದಲೇ ಉಣ್ಣಬೇಕು ಯಾಕೆ?... ಇತ್ಯಾದಿ ಇತ್ಯಾದಿ ಈ ಬಗ್ಗೆ ಸಂಶೋಧನೆ ನಡೆಸುವಷ್ಟು ಕುಶಾಗ್ರಮತಿ ಯಾಗಲೀ ಸಮಯಾವಕಾಶವಾಗಲೀ ನನಗಿದ್ದಿರಲಿಲ್ಲವಾದುದರಿಂದ "ಹಾಗೆ ಇದ್ದದ್ದು ಹಾಗೆಯೇ ಇರಲಿ"ಎಂದು ಯೋಜನಾ ಲಹರಿಯನ್ನು ಅಲ್ಲಿಗೇ ಭಂಗಿಸಿ ಮುಂದುವರಿದಿದ್ದೆ.

ಅಭ್ಯಂಜನವನ್ನಂತೂ ಮುಗಿಸಬೇಕು, ಅದಕ್ಕಾಗಿ ಏನು ಮಾಡಲಿ ಎಂದು ವಿಚಿಂತಿಸುತ್ತ ಇರುವಾಗ, ನನ್ನ ಗೆಳೆಯನೊಬ್ಬ ಸಿಕ್ಕಿದ. ಮಾತು ಮಾತು ಪ್ರಸಂಗದಲ್ಲಿ ಅಭ್ಯಂಜನಕ್ಕೆ ತನ್ನ ಮನೆಗೆ ಬರಬೇಕೆಂದೂ ಸುಖವಾಗಿ ಸ್ನಾನ ತೀರಿಸಿ, ದೋಸೆ ಹೊಡೆದು ಹೊತ್ತಿಗೆ ಸರಿಯಾಗಿ ಕರ್ತವ್ಯಕ್ಕೆ ಅಂಟಿಕೊಳ್ಳಬಹುದೆಂದೂ ಆಹ್ವಾನವನ್ನೂ ಸಲಹೆಯನ್ನೂ ಏಕ ಕಾಲದಲ್ಲಿ ಕೊಟ್ಟನು. 'ಅನ್ಯಥಾಶರಣಂ ನಾಸ್ತಿತ್ವಮೇವ ಶರಣಂ ಮಮ!' ಎಂದು ಅರ್ಜುನ ಕೃಷ್ಣನೊಡನೆ ಗೀತೆಯಲ್ಲಿ ಒಪ್ಪಿಕೊಂಡಂತೆ ನಾನೂ ನಿರುತ್ಸಾಹ, ಸಂಕೋಚಗಳನ್ನು ಬಹಿರಂಗದಲ್ಲಿ ಪ್ರಕಟಿಸುತ್ತ "ಬೇಡ ಬೇಡ"ವೆನ್ನುತ್ತ "ಆದೀತು" ಎಂದೆ.

ಅಂದು ಸಂಜೆಯಾಗುವುದರಲ್ಲಿತ್ತು. ಶುಭ್ರ ಮೇಘ ಮಾಲೆಗಳೊಳಗೆ ಓಡೋಡುತ್ತ ಸೂರ್ಯದೇವ ಅಸ್ತಾಚಲದ ತುದಿಯನ್ನು ಅಡರಿದನು. ಅಥವಾ ಅಪರಾಂಬುಧಿಯ ಉತ್ತುಂಗ ತರಂಗಕ್ಕೆ ನೆಗೆದಿದ್ದನೆನ್ನುವುದೇ ಸಮುಚಿತವಾದೀತು. ಅದು ಹೇಗೂ ಇರಲಿ, ಅರುಣ ವರ್ಣದ ಲೇಪವನ್ನು ಪಶ್ಚಿಮ ದಿಗಂಗನೆ ಹಚ್ಚಿಕೊಂಡಿದ್ದಳು. ನಿಷ್ಪ್ರಭ ಕಿಂತು ಪವಿತ್ರ ಭಾಸ್ಕರ ಬಿಂಬ ಹೊಳೆಯುತ್ತಿತ್ತು. ನಾವು ನೋಡು

ನೋಡುತ್ತಲೇ ಇದ್ದೆವು. ಎವೆಯನ್ನೊಮ್ಮೆ ಮುಚ್ಚಿ ಮತ್ತೆ ತೆರೆದಾಗ ಕೆಂಬಣ್ಣದ ನೀರು ಆಕಾಶದಲ್ಲಿ ತೋರಲಿಲ್ಲ. ಅಸ್ತವಾಯಿತು ಎಂದು ಕೊಂಡು ಮಿತ್ರನೊಡನೆ ಆತನ ಮನೆದಾರಿಯನ್ನು ಮೆಟ್ಟತೊಡಗಿದೆ.

ಕೃಷ್ಣಪಕ್ಷದ ತ್ರಯೋದಶಿಯ ರಾತ್ರಿಯ ಆರಂಭ ಭಾಗ. ದೀಪಾವಳಿಯ ಪರ್ವ ದಿನಗಳ ಆನಂದಾತಿರೇಕವನ್ನು ಮಿತಿಗಿಳಿಸಲು ಮೇಘರಾಜ ಇಂದ್ರನು ಆಕಾಶದಲ್ಲಿ ಮೋಡಗಳನ್ನು ಒಟ್ಟುಗೂಡಿಸಿರಬೇಕು; ಮತ್ತು ತನ್ನ ಸಹಚರ ವಾಯುವಿನ ಪಥ ಪ್ರತೀಕ್ಷೆಯನ್ನು ಮಾಡುತ್ತಿರಬೇಕು. ಏಕೆಂದರೆ, ರಾತ್ರಿಯಾಗುವುದೇ ತಡ ನಕ್ಷತ್ರ ಪುಂಜಗಳು ಮಿಂಚು ಹುಳಗಳಂತಾದರೂ ಮಿಂಚಿ ಬೆಳಕು ಹರಿಸಬೇಕಾಗಿತ್ತು. ಇಲ್ಲವೇ ಮದುವೆ ಚಪ್ಪರಗಳಲ್ಲಿ ವರನ ದಿಬ್ಬಣದವರ ತಲೆಗೆ ಪನೀರು ಸುರಿಸುವಂತೆ ಮಳೆ ನೀರಾದರೂ ಸುರಿಯ ಬೇಕಿತ್ತು. ಇವೆರಡರ ಅಭಾವವೇ ನನ್ನ ಅಲ್ಪ ಮತಿಯಲ್ಲೂ ಅಂತಹ ಕಲ್ಪನೆ ಮೂಡುವಂತೆ ಮಾಡಿತ್ತು.

ಒಂದರ್ಧ ಮೈಲು ನಡೆಯುವಷ್ಟರಲ್ಲಿಯೇ ಮಾರ್ಗ ಬಿಟ್ಟು ಮೂರು-ನಾಲ್ಕು ಫರ್ಲಾಂಗು ದೂರದಲ್ಲಿ ದೀಪವೊಂದು ಕಾಣಿಸಿತು. ಅದು ಪೆಟ್ರೋಮೇಕ್ಸ್ ಎಂದು ನೋಡಿದವರು ಯಾರಾದರೂ ಹೇಳಬಹುದಿತ್ತು. ಆ ಊರಿಗೆ ವಿದ್ಯುದ್ದೀಪಗಳು ಇನ್ನೂ ಬೆಳಕಿತ್ತಿಲ್ಲವಾದುದರಿಂದ ಈ ಸಿದ್ಧಾಂತ ಮತ್ತಷ್ಟು ಪುಷ್ಟಿಯಾಗುತ್ತದೆ. ಅದರ ಜತೆಗೇನೇ ಕೆಯ್ ಪಡಿಮಂಚಕ್ಕೆ ಬಡಿಯುವ, ಭತ್ತವನ್ನು ಒಗ್ಗೂಡಿಸುವ ಧ್ವನಿಯೂ ಅಸ್ಪಷ್ಟವಾಗಿ ಕೇಳತೊಡಗಿತು. ಅರೆಕ್ಷಣ ಆ ಕಡೆಗೆ ಕಿವಿಗೊಟ್ಟಾಗ, ನನ್ನ ಮನಸ್ಸಿಗೆ ಹೊಳೆದ ವಿಚಾರವಿಷ್ಟು: ಮೋಡ ಕವಿದಿದೆ. ಮಳೆ ಬರುವುದೆಂಬ ಭೀತಿಯಿಂದ ರಾತ್ರೆ ದೀಪವಿಟ್ಟಾದರೂ ಕಾಳನ್ನು ಪ್ರತ್ಯೇಕಿಸಿ ಬೆಚ್ಚಗಿಡುವ ಕಾರ್ಯದಲ್ಲಿ ಮನೆಯ ಎಲ್ಲರೂ ತತ್ಪರರಾಗಿದ್ದಾರೆ. ಕಾಳು ಒದ್ದೆಯಾದರೆ ಅವರಿಗೆ ನಷ್ಟ—ಅಂದರೆ ಅದು ರಾಷ್ಟ್ರೀಯ ನಷ್ಟ. ಎಂತಲೇ ಆನಂದದಿಂದ ಮಿತ್ರನನ್ನು ಕುರಿತು ಹೇಳಿದೆ.

'ಪರವಾ ಇಲ್ಲ. ನಿಮ್ಮ ಊರಿನ ರೈತರು ನಿಜಕ್ಕೂ ಪರಿಶ್ರಮ ಶೀಲರು.'

ಆತನ ಮುಖಚರ್ಯೆ ಹೇಗಿತ್ತೋ ಕಾಣಲಿಲ್ಲ. ಆದರೆ ಬಾಯಿ ಯಿಂದ ಯಾವ ಉತ್ತರವೂ ಹೊರಡದಿರುವುದರಿಂದ ನನ್ನ ಮಾತು ಕೇಳಿ ಸಲಿಲ್ಲವೆಂದುಕೊಂಡು, ಅದೇ ಮಾತಿನ ಅರ್ಥವನ್ನು ಪುನರುಚ್ಚರಿಸಿದೆ.

'ಹ್ಞಾಂ ಸರಿಯೇ. ಆದರೆ, ನೀನೇಕೆ ಹಾಗೆ ಹೇಳುತ್ತೀ?' ಎಂದಾ ತನ ಧ್ವನಿಯಲ್ಲಿ ತುಸು ಉದಾಸೀನತೆಯೇ ಪ್ರಕಟವಾಗಿತ್ತು.

'ಅಲ್ಲ, ನಾಳೆ ಹಬ್ಬವಾದರೂ ಇಂದು ನೋಡು, ರಾತ್ರೆ ದೀಪವಿ ರಿಸಿಕೊಂಡು, ಕಾಳನ್ನು ಪ್ರತ್ಯೇಕಿಸುತ್ತಾರೆ. ಇಂತಹ ರೈತರಿಂದಲೇ ದೇಶೋದ್ಧಾರವಾಗುವುದು; ಅಧಿಕ ಉತ್ಪಾದನೆಯಾಗುವುದು.' ನನ್ನ ಅರ್ಥ ಶಾಸ್ತ್ರದ ಸಿದ್ಧಾಂತವನ್ನೇ ಬಿಚ್ಚ ತೊಡಗಿದೆ.

'ದೇಶವೇನೋ ಉದ್ಧಾರವಾಗಬಹುದು; ಆದರೆ, ಅದರಿಂದ ಏನು ಪ್ರಯೋಜನ?'

ನನಗೆ ತುಸುರೇಗಿತು. ಅರ್ಥಶಾಸ್ತ್ರದ ಅ ಆ ಇ ಕೂಡ ಅರಿ ಯದ ಹಳ್ಳಿ ಗೂಬೆಯಂತೆ ಭಾಸವಾದ ಆ ನನ್ನ ಸನ್ಮಿತ್ರ. ತಿಳಿಯದವ ರಿಗೆ ತಿಳಿಸಿ ಹೇಳುವುದು ಅಗತ್ಯವಾದುದರಿಂದ ಆತನಿಗೆ ವಿವರಿಸುವವನಂತೆ ಹೇಳಿದೆ: "ಉತ್ಪಾದನೆಯು ಹಾಳಾಗದೆ ಎಲ್ಲವೂ ಕೈಗೆ ಬಂದರೆ ಒಟ್ಟು ಉತ್ಪತ್ತಿಯು ಹೆಚ್ಚುವುದು. ಉತ್ಪಾದನೆಯು ದೇಶದಲ್ಲಿ ಅಧಿಕವಾ ದಂತೆ ರಾಷ್ಟ್ರೀಯ ಆದಾಯವೂ ಹೆಚ್ಚುವುದು ಹೀಗೆ ರಾಷ್ಟ್ರೀಯ ಆದಾಯದ ಏರಿಕೆಯಿಂದ ದೇಶದ ಪ್ರಜೆಯ ಸರಾಸರಿ ಆದಾಯದ ಮಿತಿಯೂ ಏರುವುದು."

'ಸರಿಯಯ್ಯಾ, ಆದಾಯದ ಮಿತಿ ಏರಿದರೆ, ರೈತನಿಗೇನು ಲಾಭ ಎಂದು ನಾನು ಕೇಳುವುದು' ಆತ ನಡುವೆಯೇ ಅಡ್ಡ ಸವಾಲು ಹಾಕಿದ.

ನನಗೆ ಮತ್ತೂ ರೇಗಿತು. ನನ್ನ ಮುಂದೆ ಕನ್ನಡಿಯು ಇರುತಿ ದ್ದರೆ ಆ ದೂರದ ಹರಕು ಮುರುಕು ಬೆಳಕಿನಲ್ಲಾದರೂ ಬಿದ್ದ ನನ್ನ ಪ್ರತಿಬಿಂಬದ ಪರಿಚಯ ನನಗೆ ಆಗಲಾರದೆಂದು ಭಾಸವಾಯಿತು. ನಾನು

ತಿಳಿಸಿ ಹೇಳುವವನಂತೆ ಹೇಳಿದೆ: 'ರೈತನಿಗೆ ಅಧಿಕ ಉತ್ಪತ್ತಿಯಾದರೆ, ಆತನ ಸಾಂಪತ್ತಿಕ ಸ್ಥಿತಿಯೂ ಉನ್ನತವಾಗುವುದಿಲ್ಲವೆ?'

'ಆಗುತ್ತದೆ. ಆದರೆ, ಅದಕ್ಕೊಂದು ತಿದ್ದುಪಡಿಮಾಡಬೇಕು.'

"ಸರಕಾರಕ್ಕೆ ವಿರೋಧ ಪಕ್ಷವಿರುತ್ತದೆ ಸರಕಾರವು ಯಾವುದೇ ಗೊತ್ತುವಳಿಯನ್ನು ತರಲಿ, ಅದರಲ್ಲಿ ಏನಾದರೂ ತಿದ್ದುಪಡಿಯನ್ನು ಅದು ಸೂಚಿಸಲೇ ಬೇಕಾಗುತ್ತದೆ. ಅಂದರೆ, ಮಂಜೂರಾಗುವುದು ಸರಕಾರದ ಮೂಲಗೊತ್ತುವಳಿಯೆಂಬುದು ಸ್ವತಃಸಿದ್ಧವಾದರೂ ಪ್ರತಿ ಭಟನೆಯನ್ನು ವ್ಯಕ್ತಪಡಿಸದೆ ಹೋದರೆ, ಪ್ರತಿ ಪಕ್ಷವಿದ್ದೂ ಸತ್ತಂತೆಯೇ,'—ಹೀಗೆ ಭಾವಿಸುತ್ತ ಕೇಳಿದೆ: 'ಏನದು ನಿನ್ನ ತಿದ್ದುಪಡಿ?'

"ಅದೇನೂ ಅಷ್ಟು ದೊಡ್ಡದಲ್ಲ. 'ರೈತನಿಗೆ ಅಧಿಕ ಉತ್ಪತ್ತಿ ಆದರೆ", ಆದ ಮೇಲೆ 'ಮತ್ತು ಅದು ಆತನಿಗೇನೇ ಉಳಿದರೆ, ಎಂಬುದನ್ನು ಸೇರಿಸಿ ಮುಂದುವರಿಸಬೇಕು.

"ಅಂದರೆ?, ಆಶ್ಚರ್ಯದಿಂದ ನಾನು ಕಕ್ಕಾಬಿಕ್ಕಿಯಾಗಿ ಅರಚಿದೆ.

"ಏನಿಲ್ಲ, ನಿನ್ನ ಅರ್ಥಶಾಸ್ತ್ರ ನೀತಿಶಾಸ್ತ್ರವೆಲ್ಲ ನೋಡು, ಇದೇತೋಡಿಗೆ ಎಸೆ. ಮತ್ತೆ ಬಂದು ಮಾತಿಗೆ ನಿಲ್ಲು"

ತೋಡು ಎಂದೊಡನೆ ನಾನು ಅತ್ತಿತ್ತ ನೋಡಿದೆ. ಕಲ ಕಲ ನಾದ ಮಾಡುತ್ತ ಹರಿಯುವ ನೀರಿನ ಅಸ್ತಿತ್ವವು ಭಾಸವಾದುದರಿಂದ ಅಲ್ಲೊಂದು ತೋಡುಯಿದೆಯೆಂದು ಮನವರಿಕೆ ಮಾಡಿಕೊಂಡೆ. ಮತ್ತು ಕೇಳಿದೆ. "ನೋಡಪ್ಪ. ನಮ್ಮ ಅರ್ಥಶಾಸ್ತ್ರ ನಿತ್ಯ ಸತ್ಯವಾದುದು. ನಿನ್ನ ಈ ವ್ಯರ್ಥಶಾಸ್ತ್ರದ ರಹಸ್ಯವೇನು? ನನಗೊಂದೂ ಅರ್ಥ, ವಾಗುವುದಿಲ್ಲ."

"ಹೇಗೆ ಅರ್ಥವಾಗಬೇಕು? ಅದೆಲ್ಲಾ ನಿಮ್ಮ ಅರ್ಥಶಾಸ್ತ್ರ ನ್ಯಾಯಶಾಸ್ತ್ರ, ನೀತಿಶಾಸ್ತ್ರ, ಸಮಾಜಶಾಸ್ತ್ರ, ಇನ್ನು ಏನೇನು ಶಾಸ್ತ್ರವಿದೆಯೋ ಆವಾವುದರಲ್ಲೂ ಬರೆಯುವುದಿಲ್ಲ ಅದಿರುವುದು ಕೇವಲ ಅನುಭವ ಶಾಸ್ತ್ರದಲ್ಲಿ ಮಾತ್ರ. ನಾಲ್ಕಕ್ಷರದ ಸರ್ಟಿಫಿಕೇಟಿಗೆ ಬೆಲೆಯಿರುವ ಈ ಕಾಲದಲ್ಲಿ ಅನುಭವ ಶಾಸ್ತ್ರವನ್ನು ಗಮನಿಸುವವರಾದರೂ ಯಾರು?"

ಆತನ ಮಾತು ಬಳಸಿ ಬಳಸಿ ನನ್ನ ಬೆನ್ನ ಮೇಲೆಯೇ ಏಟಿತ್ತಿತು ಎಂದು ನಾನು ತಿಳಿದುಕೊಂಡೆ. ಇನ್ನೂ ನನ್ನ ಪುಸ್ತಕದ ಕಂತೆ ಬಿಚ್ಚ ಹೊರಟರೆ ಆತನೆದುರು ಪ್ರಯೋಜನವಿಲ್ಲವೆಂದುಕೊಂಡು ಹೇಳಿದೆ:

"ಏನಿದು? ಬರೀ ಒಗಟಿನಂತೆ ಮಾತಾಡುತ್ತಿಯಲ್ಲಾ ಸಮಾಚಾರ ವಾದರೂ ಏನು? ಎಂಥದು? ಸ್ವಲ್ಪ ವಿವರಿಸಿ ಹೇಳಿದರೆ ನನಗೂ ನಿನ್ನ ಅನುಭವ ಶಾಸ್ತ್ರ ಅರ್ಥವಾಗುವುದೋ ಏನೋ ನೋಡಬಹುದಿತ್ತು."

"ಸದ್ಯ ನಿನಗಾದರೂ ಈ ಶಾಸ್ತ್ರವನ್ನು ತಿಳಿಯುವ ಆತುರ ಹುಟ್ಟಿ ತಲ್ಲಾ"–ಆತನ ಧ್ವನಿಯು ನಿರಾಶೆಯ ಕಾರ್ಮೋಡದ ನಡುವೆ ಮಿಂಚಿದ ಆಶಾಲತೆಯನ್ನು ಪ್ರಕಟಿಸುವಂತಿತ್ತು. ಇದು ಮೊದಲೂ ಆತನು ತನ್ನ ಅನುಭವ ಶಾಸ್ತ್ರವನ್ನು ಅನೇಕರಿಗೆ ತಿಳಿಯಪಡಿಸಲು ಉದ್ದೇಶಿಸಿ ಅಸಮರ್ಥನಾದ ನೋವು ಅದರಲ್ಲಿ ತುಂಬಿತ್ತು. ಆತ ಮುಂದುವರಿ ಸಿದ; 'ನೀವು ಪೇಟೆಯಲ್ಲಿ, ಕಚೇರಿಗಳಲ್ಲಿ ಕುಳಿತು ಭ್ರಮಾತ್ಮಕವಾದ ಅಂಕೆ–ಸಂಖ್ಯೆ ಸಿದ್ಧಾಂತ ತತ್ವಗಳನ್ನು ಕಲೆ ಹಾಕುವುದರಲ್ಲಿಯೇ ಮಗ್ನರಾಗುತ್ತೀರಿ. ಮತ್ತು ದೇಶದಲ್ಲಿ ಇಷ್ಟು ಉತ್ಪತ್ತಿ ಹೆಚ್ಚಿತು, ದೇಶದ ಸಂಪತ್ತು ಅಷ್ಟು ಏರಿತು, ವ್ಯಕ್ತಿಯ ಸರಾಸರಿ ಆದಾಯ ಸೇ. ಇಂತಿಷ್ಟು ಹೆಚ್ಚಾಯಿತು. ರಾಮರಾಜ್ಯದ ದಾರಿಯಲ್ಲಿ ದೇಶ ಮುಂದುವರಿಯುತ್ತಿದೆಯೆಂದು ತಿಳಿಯುತ್ತೀರಿ, ಅದರ ಪ್ರಚಾರ ಮಾಡುತ್ತೀರಿ. ಆದರೆ, ರೈತನು ದಿನದಿಂದ ದಿನಕ್ಕೆ ಆರ್ಥಿಕವಾಗಿ ತನ್ನ ಶಕ್ತಿಯನ್ನು ಕಳೆದುಕೊಳ್ಳುತಿದ್ದಾನೆ ಎಂಬ ತಥ್ಯವನ್ನೂ ಅದರ ಕಾರ ಣವನ್ನೂ ತಿಳಿದುಕೊಳ್ಳ ಬಯುಸುವುದಿಲ್ಲ. ಮತ್ತೆ ರೈತನೇ ದೇಶದ ಬೆನ್ನೆಲುಬು ಎಂದು ಸಾರುತ್ತೀರಿ. ಆದರೆ, ಬೆನ್ನೆಲುಬಿನ ಹುರಿಗಳು ಪರಸ್ಪರ ಸಂಬಂಧ ಕಡಿದಿರುವುದನ್ನೂ ತನ್ಮೂಲಕ ಅದು ಬಾಗಿ ನಿರ್ಬ ಲವಾಗಿರುವುದನ್ನೂ ಗಮನಿಸುವ ಗೋಜಿಗೆ ಅರ್ಥಶಾಸ್ತ್ರ ಹೋಗು ವುದಿಲ್ಲ.'

ಆತನ ಉಪನ್ಯಾಸ ಕಂಬಿಯಿಲ್ಲದ ರೈಲಿನಂತೆ ಓಡುತ್ತಿತ್ತು. ನಾನು ತಡೆದು ಕೇಳಿದೆ— 'ಅಲ್ಲಾ, ನೀನು ಈಗ ಹೇಳುವುದಾದರೂ ಏನು?'

"ಕೇಳು ಅಲ್ಲಿ ದೀಪದಡಿಯಲ್ಲಿ ಕಾಳು ಕೂಡಿಸುತ್ತಾರೆ, ಯಾರು ಗೊತ್ತೆ?"

"ಮತ್ತಾರು ಅದರ ಯಜಮಾನರು."

"ಸರಿಯಾದುದನ್ನೇ ಹೇಳಿದೆ; ಆದರೆ, ಅದರ ಯಜಮಾನರು ಯಾರು ಗೊತ್ತೆ?"

"ಅಂದರೆ? ಅದನ್ನು ಬೆಳೆಸಿದವರು?"

"ಹ್ಞಾಂ, ಅದೂ ಸರಿಯೆನ್ನು. ಅದನ್ನು ಬೆಳೆಸಿದವರು?"

"ಇದೇನು ಹೀಗೆಲ್ಲಾ ಕೇಳುತ್ತಿದ್ದಿಯಾ? ಬೆಳೆಸಿದವರು ಯಾರು ಎಂದರೆ? ರೈತರು. ಮತ್ತಾರು ಬರುತ್ತಾರೆ?"

'ಇಲ್ಲಿಯೇ ನೋಡು ನಿಮ್ಮ ಅರ್ಥಶಾಸ್ತ್ರವೋ ಮತ್ತ ಶಾಸ್ತ್ರವೋ ಏನೋ ಇದೆಯಲ್ಲಾ, ಅದು ತಪ್ಪಿಬಿದ್ದಿದೆ.'

'ಹಾಗೆಂದರೆ?'

'ನೋಡು ಯಜಮಾನರು ರೈತರು ಎಂದೆಯಲ್ಲ? ಸತ್ಯ ಹೇಳುವುದಾದರೆ, ಕಾಳಿನ ಯಜಮಾನರು ಅವರಲ್ಲ, ಸಾಹುಕಾರರು, ಅದನ್ನು ಬೆಳೆಸಿದವರು ಅವರೇ ತಿಳಿಯಿತೆ'?

ನಾನು ಚಕಿತಚಿತ್ತನಾಗಿ ಉಗುರು ಕಚ್ಚಿಕೊಂಡೆ.

"ನೋಡು, ಈ ಪೆಟ್ರೊಮೇಕ್ಸ್ ದೀಪವನ್ನು ತಂದಿರಿಸಿ ಕಾಳಿನ ಯಜಮಾನರು ಅವನ್ನು ಕೂಡಿಸಿ ಗೋಣಿ ಚೀಲಗಳಲ್ಲಿ ತುಂಬಿಸುತ್ತಾರೆ. ಇದೇ ಇಲ್ಲಿ ನೋಡು ಪಕ್ಕದಲ್ಲಿ ಗಾಡಿ. ಇದರಲ್ಲಿ ನೋಡು ನಾಲ್ಕಾರು ಗೋಣಿ ತುಂಬಿಯಾಗಿದೆ" ಎಂದು ಅವನು ಅಲ್ಲೇ ಪಕ್ಕದಲ್ಲಿ ಗಾಡಿಯೊಂದನ್ನು ತೋರಿಸಿದ. ದಾರಿ ನಡೆಯುತ್ತ ನಾವು ಮುಂದುವರಿಯುತಿದ್ದೆವು. ಆ ದೀಪದ ಮಂದ ಪ್ರಕಾಶವು ನೇರವಾಗಿ ಅಲ್ಲಿ ಬೀಳುತಿತ್ತು. ಆತನೇ ಮಾತು ಮುಂದುವರಿಸಿದ: 'ಮಳೆಗಾಲದ ದಿನಗಳಲ್ಲಿ ಮುಡಿಗೆ ನಾಲ್ಕು ಮುಡಿ ಬತ್ತ ಮರಳಿ ಕೊಡುವ ಶರ್ತದ ಮೇಲೆ ರೈತರು ಅಕ್ಕಿ-ಕಾಳು ಎರವಲು ತರುತ್ತಾರೆ. ಕೊಯ್ಲಿಗೆ ಸಿದ್ಧ ಆಗುವುದೇ ತಡ ದೀಪ-

ಜನ ಹಿಡಿದುಕೊಂಡು ಕೊಯ್ಸಿ, ಬಡೆಸಿ ತನ್ನ ಲಿಕ್ಷಾಚಾರವನ್ನು ಮುಗಿಸಿಕೊಂಡು ಹೋಗುತ್ತಾರೆ?"

'ಅಂದರೆ, ರೈತರಿಗೆ ಅವರ ಕಾಳಿನಲ್ಲಿ ಅಧಿಕಾರವಿಲ್ಲ?'

"ಇಲ್ಲವೆಂದವರು ಯಾರು? ಸಾಹುಕಾರರು ತಮ್ಮದನ್ನು ಕೊಂಡೊಯ್ಯುತ್ತಾರೆ. ಉಳಿದುದು ಮತ್ತಾರಿಗೆ?"

"ಅಷ್ಟೊಂದು ನಿರ್ದಯರೇನು ಸಾಹುಕಾರರು? ರೈತನನ್ನು ಅಪರಾಧಿಯಂತೆ ನಡೆಸಿಕೊಳ್ಳುವುದಕ್ಕೆ? ಆತನೇ ಎರವಲನ್ನು ಮರಳಿಸುವುದಿಲ್ಲವೆ?"

"ನೋಡು, ಅದೂ ಕಷ್ಟವೇ. ರೈತರು ಒಂದಕ್ಕೆ ಎಂಟು-ಹತ್ತು ಪಟ್ಟು ಬಡ್ಡಿ ತೆರಬೇಕಾಗುತ್ತದೆ; ಅದರ ಮೇಲೆ ಗದ್ದೆಯ ಒಡೆಯರ ಗೇಣಿ ತೀರಿಸಬೇಕಾಗುತ್ತದೆ. ಆಗ ಬೆಳೆದ ಹತ್ತು ಮುಡಿಯನ್ನು ಆತ ಯಾರಿಗೆ ಹಂಚಬೇಕು? ತಾನೇನನ್ನು ಉಣ್ಣಬೇಕು? ಯಾರು ಮೊದಲು ದೊಣ್ಣೆ ಹಿಡಿದು ಬರುತ್ತಾರೆಯೋ ಅವರ ಋಣ ಸಂದಾಯವಾಗುತ್ತದೆ ಅಷ್ಟೆ- ಮತ್ತೆ ಹೀಗೆ ಮಾಡದೆ ಹೋದರೆ, ಸಾಲವೂ ವಸೂಲಾಗುವುದಿಲ್ಲ, ಗೇಣಿಯೂ ತೀರುವುದಿಲ್ಲ."

"ಅಷ್ಟು ಕೆಟ್ಟವರೇನು ರೈತರು?"

"ಜನ್ಮದಿಂದ ಯಾರೂ ಕೆಟ್ಟವರಾಗುವುದಿಲ್ಲ. ಪರಿಸ್ಥಿತಿ ವಶದಿಂದ ಹಾಗಾಗುತ್ತಾರೆ. ಏನೋ ದುರದೃಷ್ಟವಶದಿಂದ ಒಂದು ವರ್ಷ ಸಾಲಕ್ಕೆ ಬಿದ್ದರೆ ಸರಿ, ಅದರ ಬಡ್ಡಿ ತೆರುವುದಕ್ಕೇನೆ ಉತ್ಪತ್ತಿ ಸಾಲದಾಗುವಾಗ, ಅಸಲು ಎಲ್ಲಿಂದ ತೀರಬೇಕು? ರೈತನಿಗೆ ನಿದ್ರೆಯಾದರೂ ಹೇಗೆ ಬೀಳಬೇಕು? ಮತ್ತೆ ಸುವಿಚಾರ, ಸುಶೀಲ, ಧರ್ಮಾಧರ್ಮ ವಿವೇಕ ಎಲ್ಲಿಂದ ಬರಬೇಕು? ಮಾನಸಿಕ ಅಶಾಂತಿಗೆ ಬಲಿಬಿದ್ದ ಆತ ದೇಶದ ಬೆನ್ನೆಲುಬಾಗಲು ಹೇಗೆ ತಕ್ಕವನಾದಾನು? ಅವನ ಹುರಿ ಮುರಿದಿದೆ, ಬೆನ್ನು ಬಾಗಿದೆ, ಮುಖ ಜೋಲು ಬಿದ್ದಿದೆ; ಕಣ್ಣು ನಿಸ್ತೇಜವೆನಿಸಿದೆ....."

"ಅಲ್ಲ, ಕೃಷಿಕರ ಸಹಕಾರಿ ಬೇಂಕು ಈಗ ಸಾಮಾನ್ಯವಾಗಿ ಎಲ್ಲಾ ಗ್ರಾಮಗಳಲ್ಲೂ ಇದೆಯಲ್ಲ? ಸಹಕಾರಿ ಸಂಘಗಳಿವೆ. ಅವುಗಳು ರೈತರಿಗೆ ಆರ್ಥಿಕ ಸಹಾಯವನ್ನು ನೀಡುತ್ತವೆಯಲ್ಲ?"

"ಹೌದು, ನೀಡುತ್ತವೆ. ಆದರೆ, ಎಂತಹ ರೈತನಿಗೆ? ಶ್ರೀಮಂತ ಭೂಮಾಲಿಕನಾಗಿ ಕೂಲಿಗಳಿಂದ ಕೆಲಸ ಮಾಡಿಸಿ ರೈತನೆಂಬ ಹೆಸರು ಇಟ್ಟುಕೊಂಡಂತವರ ಕೈಯಲ್ಲಿವೆ ಈ ಬೇಂಕುಗಳು, ಸಂಘಗಳು. ಅಲ್ಲಿ ಸಾಮಾನ್ಯ ರೈತನಿಗೆ ಪ್ರವೇಶ ದೊರೆತೀತೆ?"

"ಸಮಾಜವಾದ ಮಾದರಿಯ ಕಲ್ಯಾಣ ರಾಷ್ಟ್ರದಲ್ಲಿಯೂ ಪ್ರವೇಶವಿಲ್ಲವೆಂದರೆ...?"

"ಅದೇ ನೋಡು ನಿನ್ನ ಪುಸ್ತಕದ ಉದ್ದೇಶ ಮತ್ತು ಸಾಧನೆ. ಆದರೆ ಕಾರ್ಯ ನೀತಿ ಮತ್ತು ಪರಿಣಾಮದಲ್ಲಿ ಅಸಮಾನತೆ, ಅಸಮಾಜವಾದಿ, ಅಕಲ್ಯಾಣವೇ ತೋರುತ್ತವೆ. ಶ್ರೀಮಂತರು ಮತ್ತಷ್ಟು ಶ್ರೀಮಂತರಾಗುತ್ತಾರೆ; ಚಿಕ್ಕ ಸಾಹುಕಾರರು ದೊಡ್ಡ ಮಂಡಿ ವರ್ತಕರಾಗುತ್ತಾರೆ. ಆದರೆ, ಸಾಮಾನ್ಯ ರೈತರ ಈ ಪರಿಸ್ಥಿತಿ ದಿನದಿಂದ ದಿನಕ್ಕೆ ಕುಂಠಿತವಾಗುತ್ತ ಇದೆ".

"ಎಂದರೆ, ಸಾಹುಕಾರರು ರೈತರ ರಕ್ತ ಹೀರುತ್ತಾರೆ ಅಲ್ಲವೆ?"

"ಹಾಗೇ ಏಕೆ ಹೇಳಬೇಕು? ರಕ್ತ ಹೀರುವುದು ಜಿಗಳೆಯ ಗುಣ ಹೀರು ಎಂದು ನಾವಾಗಿಯೇ ಜಿಗಳೆಯ ಬಳಿ ನಡೆದರೆ, ಆ ತಪ್ಪು ನಮ್ಮದೆ, ಅಥವಾ ಜಿಗಳೆಯದೆ?"

"ನಮ್ಮದೇ ಎಂದು ಹೇಳಬೇಕು."

"ಸರಿ ಹಾಗಾದರೆ, ರೈತನಲ್ಲಿ ತಮ್ಮ ಬಡತನಕ್ಕಿರುವ ಕಾರಣಗಳನ್ನು ತಿಳಿದುಕೊಂಡು ಅವನ್ನು ದೂರೀಕರಿಸುವ ಪ್ರಜ್ಞೆ ಹುಟ್ಟಬೇಕು. ಪ್ರಜ್ಞಾಹೀನರು ಕೃಷಿ ವಲಯದಲ್ಲಿ ಅದೆಂತಹ ಹೋರಾಟ ನಡೆಸಬಲ್ಲರು? ನಿಮ್ಮ ಶಾಸ್ತ್ರ ರೈತರೂಪಿ ಶ್ರೀಮಂತರ ಪರಿಸ್ಥಿತಿಯನ್ನು ಕಂಡು ತೃಪ್ತಿ ಪಡುತ್ತದೆ; ಅದಕ್ಕೆ ನೈಜ ರೈತನ ದರ್ಶನವಾದಂತಿಲ್ಲ. ಆದುದರಿಂದಲೇ ಹೀಗೆ."

"ನೀನು ಹೇಳುವುದು ಸರಿಯೆಂದು ಕಾಣುತ್ತದೆ" ಎಂದ ನನ್ನ ಕಿವಿಗೆ ಗಟ್ಟಿಯಾಗಿ ಆಡುವ ಸದ್ದು ಕೇಳಿಸಿತು. ಅತ್ತ ಕಿವಿಗೊಟ್ಟೆ.

"ಕಾರ್ತಿಯಿಂದ ಸೋಣದವರೆಗೆ ಹತ್ತು ಮುಡಿ ತಂದಿದ್ದಿ. ೪೦ ಮುಡಿ ಆಗುತ್ತೆ. ಅದರ ಮೇಲೆ ರೂ. ೧೦೮-೨೯ ನಯೇಪೈಸೆಯ ಸಾಮಾನು ಕಡ. ಮುಡಿಗೆ ೭ ರೂಪಾಯಿ ಎಂದಿಟ್ಟು ಕೊಂಡರೂ ಆದಕ್ಕೆ ೧೫½ ಮುಡಿ. ಒಟ್ಟು ೫೫½ ಮುಡಿ ಆಯ್ತು. ಆದ್ರೆ ನೋಡು, ಇಲ್ಲಿ ತುಂಬ್ಸಿದ್ದು ಬರೀ ೨೫ ಗೋಣಿ ಅಂದ್ರೆ ನೀನೇ ಇನ್ನು ೬ ಮುಡಿ ಕೊಡ್ಬೇಕಾಗುತ್ತೆ. ಎಲ್ಲಿದೆ? ಅಥ್ವಾ ದುಡ್ಡೇ ಕೊಡ್ತೀಯ?"

ಐದು ನಿಮಿಷ ಮೌನ ವಾತಾವರಣ. ಆದರಿಂದಲೇ ನಾನು ಊಹಿಸಿಕೊಂಡೆ, ರೈತ ಬೆಳೆಸಿದ್ದೆಲ್ಲಾ ಕೊಟ್ಟ ಮೇಲೂ ೬ ಮುಡಿ ಭತ್ತ ಋಣ ಖಾತೆಯಲ್ಲೇ ಉಳಿದಿದೆ. ಹಾಗಾದರೆ, ಮುಂದೆ ಆತ ಸುಗ್ಗಿ ನಾಟುವುದು ಹೇಗೆ? ಅದು ಕೈಗೆ ಬರುವವರೆಗೆ ಉಣ್ಣುವುದು? ಮತ್ತೆ ಗೇಣಿ ತೆರುವುದು?

ನಮ್ರ ಸ್ವರವೊಂದು ಕೇಳಿಸಿತು: "ಒಡೆಯ್ರ, ಈಗ ನಲ್ವತ್ತ ಒಯ್ರಿ. ನಾವಾದ್ರೂ ನಾಲ್ಕುದಿನ ಕಳೀ ಬೇಕಲ್ವಾ? ನಿಮ್ಮ ಬಾಕೀನ ಸುಗ್ಗಿ ಆದ್ಮೇಕಡ್ಲೆ ಮುಟ್ಟಿಸ್ತೇನೆ."

"ಛೆ, ಛೆ, ಅದೆಲ್ಲಾ ಹೇಗಾಗುತ್ತೆ ಸೋಮಣ್ಣ? ನಮ್ಮ ದುಡ್ಡೇನು ಧರ್ಮಕ್ಕೆ ಬಂದದ್ದೇ ಅಥ್ವಾ ನೀನು ನಮ್ಗೆ ಧರ್ಮಕ್ಕೆ ಅಳೀತಿದ್ದಿಯ?"

"ಹಾಗಲ್ಲ ಸ್ವಾಮಿ, ನಿಮ್ಮ ಹತ್ರ ಧರ್ಮಕ್ಕೆ ಬಿಡಿ ಅಂದ್ನೆ?"

"ಅಲ್ಲ, ನೀನು ಬೇಕೇ ಬೇಕು ಎಂದು ಹಠ ಹಿಡಿಯುವಾಗ, ಇಲ್ಲಾ ಅನ್ನೋಕಾಗುತ್ತ್ಯೆ? ಆಯ್ತು. ಆದ್ರೆ ನೋಡು, ಸುಗ್ಗಿಯಲ್ಲಿ ೧೦ಕ್ಕೆ ೨೦ ಕೊಡಬೇಕಾದೀತು."

"ಮತ್ತೇನು ಮಾಡ್ಲಿ ಸ್ವಾಮಿ. ನಿಮ್ಮ ಹೆಸರು ಹೇಳ್ಕೊಂಡಾದ್ರೂ ಸಾಗ್ವಳಿ ಮಾಡ್ತೀನಿ. ಮತ್ತೆ ನಾಳೆ......"

"ಕೇಳಿದಿಯೊ ಶಾಮೂ" ಎಂಬ ಧ್ವನಿ ಕಿವಿದೆರೆಗೆ ಬಡೆದಾಗಲೆ ನನಗಾದುದು ಎಚ್ಚರ. ಕಣ್ಣುಗಳಿಂದ ನೀರು ಸುರಿಯತೊಡಗಿತ್ತು ಭಾರವಾದ ಕಣ್ಣುಗಳೆಡೆ ತುಂಬಿದ ನೀರಹನಿಗಳ ಮಧ್ಯದಿಂದ ಆ ಮಂದ

ಕಿರಣಗಳೆಡೆ ಗೆಳೆಯ ರಾಮುವನ್ನು ಕಂಡೆ. ಆತನ ನಯನಗಳು ಅಸಹಾಯಕತೆಯನ್ನು ಪ್ರಕಟಿಸುವಂತಿದ್ದುವು. ಅಷ್ಟರಲ್ಲಿಯೇ ಒಂದು ಮಿಂಚು ಮಿಂಚಿತು. ಗುಡುಗು ಗುಡುಗಿತು. ಸೆಳೆಮಿಂಚಿನ ನಸು ಬೆಳಕಿನಲ್ಲಿ ನಮ್ಮನ್ನು ನಾವೇ ನೋಡಿಕೊಂಡಿದ್ದೆವು, ರಾತ್ರಿ ಚಂದ್ರೋದಯದಲ್ಲಿ ಆಗಬೇಕಾದ ತೈಲಾಭ್ಯಂಜನದಲ್ಲಿ ಅಭ್ಯಂಜನವಂತೂ ಆಗಲೇ ನಡೆದಿತ್ತು. ತೈಲದ ಅಭಾವ ಮಾತ್ರ ಎಂದೆಂದಿಗೂ ಎದ್ದುತೋರುವಂತಿತ್ತು.

## ೩ ಒಡೆದು ಬೆಸೆದ ಗಡಿಗೆ

ಡಂಯ್.... ಡಂಯ್.... ಡಂಯ್.... ಶಾಲೆಯ ಅವಧಿ ಸೂಚಿಸುವ ಗಂಟೆ ಮೂರು ಬಾರಿಸಿತ್ತು. ಆ ಐನೂರು ಮಕ್ಕಳ ಶಾಲೆಯ ತುಂಬ ವಿದ್ಯಾರ್ಥಿಗಳ ಗಜಬಜವು ಪ್ರತಿಧ್ವನಿಸತೊಡಗಿತ್ತು—ಮಾಡಿನ ಹಂಚೇ ಹಾರಿಹೋಗುವಂತೆ ಎಂಟನೆಯ ತರಗತಿಯಿಂದ ಹೊರಬಿದ್ದ ಗೋಪಾಲ ಮಾಸ್ತರರು ನೇರಾಗಿ ಆಫೀಸು ಕೋಣೆಯನ್ನು ಹೊಕ್ಕರು. ತನ್ನ ಕವಾಟನಲ್ಲಿ ಏನನ್ನೊ ಅರಸುವಂತೆ ಅತ್ತಿತ್ತ ಕೈ ಹಾಕಿದರು; ಕೊನೆಗೆ, ನಿರಾಶೆಯ ಮುಖವಾಡವನ್ನು ಧರಿಸಿ ಹೊರ ಜಗಲಿಯ ಪಕ್ಕದಲ್ಲಿ ನಿಂತು ತರಗತಿಯಿಂದ ಹೊರಬರುವ ವಿದ್ಯಾರ್ಥಿಗಳತ್ತ ಈಕ್ಷಿಸತೊಡಗಿದರು. ಅವರ ಮುಖ ಛಾಯೆಯಿಂದ ಯಾರನ್ನೋ ಯಾವುದೋ ಉದ್ದೇಶಕ್ಕಾಗಿ ಪ್ರತೀಕ್ಷಿಸುವಂತೆ ಕಂಡುಬರುತಿತ್ತು. ಆಗಲೇ ಓಡುತಿದ್ದ ಬಾಲಕನೋರ್ವನನ್ನು ಕೂಗಿದರವರು: “ರಾಜೂ....”

ಅಟದ ಬಯಲತ್ತ ತೀವ್ರ ವೇಗದಿಂದ ಕಾಲೋಡಿಸುತಿದ್ದ ರಾಜು ಮಾಸ್ತರರ ಕರೆಯು ಕರ್ಣಪಟಲಕ್ಕೆ ಬಡಿದೊಡನೆಯೇ ಅರೆಕ್ಷಣ ನಿಸ್ತಬ್ಧನಾದ. ಆತನಿಗೆ ಯಾರು ಕೂಗಿದರು ಏಕೆ ಕೂಗಿದರು ಎಂಬುದರ ಅರಿವೇ ಆಗಿರಲಿಲ್ಲ. ಎಂತಲೇ ಸುತ್ತ ನೋಡಿದ. ಮಾಸ್ತರರ ಮುಖಕಂಡು ಬಂದುದರಿಂದ ಆಟದಲ್ಲಿ ಓಲಾಡುತಿದ್ದ ತನ್ನ ಮನವನ್ನು ಬಿಗಿಹಿಡಿದು ಮೆಲ್ಲಮೆಲ್ಲನೆ ಅಂಜುತಂಜುತ್ತ ಸಮೀಪ ಬಂದು ನಿಂತ.

“ನೋಡು ಆ ಮಂಜುನಾಥನನ್ನು ಬರಹೇಳು”— ಅಧ್ಯಾಪಕರ ಆಜ್ಞೆಯಿದು.

ರಾಜಗೋಪಾಲ ಸುಮ್ಮನೆ ನಿಂತ. ಆತ ಮರುಮಾತಾಡಲಿಲ್ಲ; ಆದರೆ, ಅಧ್ಯಾಪಕರ ಆಜ್ಞೆಯನ್ನು ಪಾಲಿಸುವುದಕ್ಕೂ ಆತ ಪಾದಕೀಳ

ಲಿಲ್ಲ, ಮಾಸ್ತರರು ತನ್ನ ಆಜ್ಞೆಯನ್ನು ಮರಳಿ ಉಚ್ಚರಿಸಿದರು. ರಾಜು ಅವರ ಮುಖವನ್ನೊಮ್ಮೆ ನೋಡಿ, ತಲೆಕೆಳಗೆ ಹಾಕಿದ. ದಿಙ್ಮೂಢ ರಾದ ಅಧ್ಯಾಪಕರು ವಿವರವನ್ನು ತಿಳಿಯಲೆಳಸುವಂತೆ ಕೇಳಿದರು: "ಏನಪ್ಪಾ, ಮಂಜು ಶಾಲೆಗೆ ಬಂದಿದ್ದಾನಲ್ಲಾ?"

"ಹೌದು...."

"ಆತನನ್ನು ಇಲ್ಲಿ ಬರಹೇಳು...."

ರಾಜು ಮೌನ.

"ಏನಪ್ಪಾ ಅದು? ಯಾಕೆ ಮಾತಾಡುವುದಿಲ್ಲ? ಹೊರಡು. ಬೇಗನೆ ಬರ ಹೇಳು."

"ಸಾರ್..." ರಾಜು ಏನೋ ಹೇಳಬಯಸುವಂತೆ ತೋರಿಸಿ ಕೊಂಡು ಮತ್ತೆ ನಿರುತ್ತರನಾದ.

"ಏನೋ ಅದು?" ಕುತೂಹಲದಿಂದ ಪ್ರಶ್ನಿಸಿದರು ಅಧ್ಯಾಪಕರು.

"ಅವನು ನನ್ನೊಡನೆ ಮಾತಾಡುವುದಿಲ್ಲ...ಸಾರ್. ಆದುದ ರಿಂದ ನಾನೂ...."

ಅಧ್ಯಾಪಕರಿಗೆ ಆಶ್ಚರ್ಯವೆನಿಸಿತು. ರಾಜು ಮತ್ತು ಮಂಜು ಒಂದೇ ತರಗತಿಯಲ್ಲಿ ಓದುತ್ತಿರುವವರು. ಪ್ರಾಯಃ ಒಂದನೆ ವರ್ಗ ದಿಂದ ಎಂಟನೆಯವರೆಗೂ ಅವರಿಬ್ಬರೂ ಒಟ್ಟಾಗಿಯೇ ಅಭ್ಯಸಿಸಿ ಕೊಂಡು ಬಂದವರು. ಹಿಂದಿನ ಕೆಲ ವರ್ಷ ಇವರು ಒಂದೇ ಬೆಂಚಿ ನಲ್ಲಿಯೂ ಕೂರಿದ್ದರು. ಹಾಗಿರುವಾಗ, ಈ ರೀತಿಯ ದ್ವೇಷಭಾವವೇ ತಕ್ಕೆ? ಎಂಬ ಸಂದೇಹ ಅವರನ್ನು ಕಾಡಿತು. ಆದರೆ, ಅಲ್ಲಿ ಚಿಂ ತಿಸಲು ವೇಳೆಯಿರಲಿಲ್ಲ ಏನನ್ನೂ ಮಾಡುವುದಕ್ಕೆ ಅವಕಾಶವೂ ಇದ್ದಿಲ್ಲ. ಮತ್ತೊಬ್ಬ ಹುಡುಗನನ್ನು ಕರೆಸಿ ತನ್ನ ಕೆಲಸವನ್ನವರು ಪೂರೈಸಿಕೊಂಡರು.

ರಾಜಗೋಪಾಲ ತುಸು ಬುದ್ಧಿವಂತ ಹುಡುಗ. ನೋಡಲು ಚುರುಕು. ಪಾಠದಲ್ಲಿ ಮಾತ್ರವಲ್ಲ, ಆಟ, ನಾಟಕ ಇತ್ಯಾದಿಗಳಲ್ಲೂ ಆತನ ಅಭಿರುಚಿ ಬಹಳ ಶಾಲಾ ವರ್ಧಂತ್ಯುತ್ಸವದ ವೇಳೆಯಲ್ಲಿ ನಾಟಕ ಪ್ರಾಕ್ಟೀಸಿಗೆ ನಾಯಕನೇ ರಾಜ. ಗೋಪಾಲರಂತಹ ಮಕ್ಕಳ

ನಡುವೆ ತಾನು ರಾಜನಾಗಿ ಅವರನ್ನು ಸರಿಯಾದ ರೀತಿಯಲ್ಲಿ ಮುಂದುವರಿಸಿಕೊಂಡು ಹೋಗುವ ಅಪೂರ್ವ ಶಕ್ತಿ ರಾಜಗೋಪಾಲನಲ್ಲಿತ್ತು, ಆದರೆ, ಮಂಜುನಾಥ ತೀರಾ ಪ್ರಶಾಂತನೇ. ಚಂದ್ರನಂತೆ ಸದಾ ಕೂರುತ್ತಲೇ ಇರುವವ; ಹಾಗೆಂದು ಆತನಿಗೂ ಶುಕ್ಲಪಕ್ಷವೆಂಬುದಿದೆ ತಾನೆ? ಈತನ ಶುಕ್ಲಪಕ್ಷ ಪರೀಕ್ಷಾವೇಳೆ ಮಾತ್ರ. ಆಟ–ಓಟ ವೆಂದರೆ ಮಾರುದ್ದ ಹಿಂದೆ ಹಾರುವ ಜೀವಿಯಾತ. ಎಂತಲೇ ರಾಜು ಶಾಲೆಯ ರಾಜನಾಗಿದ್ದರೆ, ಮಂಜು ಮಂಜಿನಂತೆ ಮಸಕಾಗಿರುತಿದ್ದ.

ಗೋಪಾಲಯ್ಯ ಅಂದು ಶಾಲೆಯಿಂದ ಮನೆಗೆ ಬಂದರು. ಒಂದು ಶಾಲೆಯ ಮಕ್ಕಳೆಲ್ಲರೂ ಒಂದೇ ತಾಯಿಯ ಪುತ್ರ-ಪುತ್ರಿಯರಂತೆ ಅನ್ಯೋನ್ಯವಾಗಿರಬೇಕು ಎಂಬ ವಾದ ಆವರದ್ದು. ಇದನ್ನು ಯಾರೂ ಅಲ್ಲಗಳೆಯಲಾರರೆಂಬುದು ನಿಜವಾದರೂ ಅದು ಎಷ್ಟರ ಮಟ್ಟಿಗೆ ಸಾಧನೀಯವೆಂಬುದನ್ನು ಹೆಚ್ಚಿನವರು ಸಂದೇಹ ದೃಷ್ಟಿಯಿಂದಲೇ ನೋಡುತ್ತಾರೆ. ಗೋಪಾಲಯ್ಯನವರ ಮನಃಪಟಲದಲ್ಲಿ ಈ ರಾಜ – ಮಂಜುರವರ ವೈಮನಸ್ಯದ ಬೀಜವೆಲ್ಲಿ ಬಿತ್ತಲ್ಪಟ್ಟಿತೆಂದು ತಿಳಿಯುವ ಆತುರ ಹುಟ್ಟಿತು. ಅಂದಿನಿಂದ ಅವರು ತಮ್ಮ ಸಂಶೋಧನೆಯನ್ನು ತೊಡಗಿದರು.

ಕೆಲದಿನಗಳಲ್ಲಿ ಅವರು ತಮ್ಮ ಪ್ರಯತ್ನದಲ್ಲಿ ಯಶಸ್ವಿಯಾದರು. ಮೂರು ವರ್ಷಗಳ ಹಿಂದೊಮ್ಮೆ ರಾಜು—ಮಂಜು ಆಟದ ಬಯಲಿನಲ್ಲಿ ಚೆಂಡಾಟವಾಡುತಿದ್ದ ವೇಳೆ ದೂರ ಹಾರಿ ಬರುತಿದ್ದ ಚೆಂಡನ್ನು ಹಿಡಿಯಲು ಪ್ರಯತ್ನಿಸಿದರೆಂದೂ ಚೆಂಡು ಇಬ್ಬರ ಕೈಗಳ ನಡುವೆ ಸಿಕ್ಕಿಬಿದ್ದಿತೆಂದೂ ನನಗೆ – ತನಗೆ ಎಂಬ ವಾದವಿವಾದವೆದ್ದು, ಅದುವೇ ಅವರ ಮೈತ್ರಿಯನ್ನು ಕೆಡಿಸಿಬಿಡಲು ಕಾರಣವಾಯಿತೆಂದೂ ತಿಳಿದುಕೊಂಡರವರು. ಇದೇ ದ್ವೇಷ ಅಥವಾ ವೈರತ್ವದ ಮೂಲಕ್ಕೆ ಬೀಜವಾಗಿ ಪರಿಣಮಿಸಿ, ಅಂದಿನಿಂದ ಪರಸ್ಪರ ಹೊಕ್ಕು ಬಳಕೆಗಳನ್ನೂ ಸಂಪೂರ್ಣ ಬಿಟ್ಟುಕೊಂಡರೆಂಬ ರಹಸ್ಯವನ್ನು ಉಪಾಯಾಂತರದಿಂದ ಬೇಧಿಸಿ ಬಿಟ್ಟರು. ಒಡೆದ ಕನ್ನಡಿಯನ್ನು ಕೂಡಿಸುವ ಜಾದುವನ್ನು ಅವರಿಗೀಗ ಅಭ್ಯಸಿಸಬೇಕಾಗಿತ್ತು.

ವಿದ್ಯಾರ್ಥಿಗಳೆಂದಾಕ್ಷಣ ಅವರಲ್ಲಿಯೇ ಪರಸ್ಪರ ಹೊಗಳಿಕೆತೆಗಳಿಕೆಗಳು, ಮಿತ್ರತ್ವ—ಶತ್ರುತ್ವಗಳು ಒಂದುಕ್ಷಣ ಬರುತ್ತವೆ; ಹೋಗುತ್ತವೆ. ಅದು ಸಾಮಾನ್ಯ ವಿಷಯವಾಯಿತು. ಆದರೆ, ಒಂದು ಕ್ಷುಲ್ಲಕ ಕಾರಣವನ್ನು ಮುಂದಿಟ್ಟು ಕೌರವ–ಪಾಂಡವರಿಗಿಂತಲೂ ಬಲವಾದ ದ್ವೇಷವು ಮಂಜು—ರಾಜುರವರ ನಡುವೆ ಇದ್ದಿತೆಂದು ಪರಿಶೀಲನೆಯಿಂದ ವೇದ್ಯವಾಯಿತು. ಗರುಡನನ್ನು ಕಾಣುವ ಹಾವಿನಂತೆ ಇಬ್ಬರು ಒಬ್ಬರನ್ನೊಬ್ಬರು ಕಂಡು ತಲೆ ತಗ್ಗಿಸುತಿದ್ದರು. ಈ ಸಂಗತಿ ಹೆಚ್ಚಿನ ಅಧ್ಯಾಪಕರಿಗೂ ತಿಳಿಯದಿರಲಿಲ್ಲ. ಅದೇಕೋ ಗೋಪಾಲ ಮಾಸ್ತರರ ಗಮನಕ್ಕಿದು ಬಂದಿರಲಿಲ್ಲ. ಒಮ್ಮತದೊಳೇಕ ಪಂಥವ ಹಿಡಿದು ಸಾಗಬೇಕಾದ ಈ ಭಾವಿಭಾರತದ ನಾಗರಿಕರು ಎಳೆತನದಲ್ಲಿಯೇ ಮಾತ್ಸರ್ಯದ ಬೀಜವನ್ನು ಬಿತ್ತಿಸಿಕೊಂಡರೆ, ಆದರಿಂದ ಹಾನಿ ಸುನಿಶ್ಚಿತವೆಂಬುದಕ್ಕೆ ಅನ್ಯ ಪ್ರಮಾಣ ಅನಗತ್ಯ— ಇದರಿಂದಾಗಿ ಬಿರಿದಿದ್ದ ಬೆಸುಗೆಯನ್ನು ಮರು ಬೆಸೆಯಲೇ ಬೇಕಾಗಿತ್ತು.

ಸೂರ್ಯ ಉದಯಿಸುತ್ತಾನೆ; ಹಾಗೆಯೇ ಅಸ್ತಮಿಸುತ್ತಾನೆ. ಭೂಮಿ ಸುತ್ತುತ್ತಿರುತ್ತದೆ; ರಾತ್ರಿಹಗಲುಗಳು ಮರುಕೊಳಿಸುತ್ತವೆ. ಅವು ಯಾರನ್ನೂ ಕಾಯಲಾರವು. ಕೆಲವಾರು ದಿನಗಳು ಇದೇ ರೀತಿ ಗತಿಸಿದುವು. ಅವುಗಳನ್ನು ಯಾರೊಬ್ಬನೂ ವಿಶೇಷವಾಗಿ ಗಮನಿಸಲಿಲ್ಲ. ರಾಜು-ಮಂಜುರವರ ನಡುವೆ ಬೆಳೆದಿದ್ದ ತೆರೆಯು ಅತ್ತಿತ್ತ ಚಲಿಸಲಿಲ್ಲ. ಅದು ಹಾಗೆಯೇ ಅಚಲವಾಗಿ ಹರಡಿಕೊಂಡಿತ್ತು. ತೆರೆಯನ್ನು ಸರಿಸುವ ಲಘು ಪ್ರಯತ್ನಗಳೇನೋ ನಡೆದಿದ್ದುವು. ಆದರೆ, ಅವು ಯಶಸ್ವಿಯಾಗುವ ಸಲ್ಲಕ್ಷಣಗಳು ದೂರವಾಗಿದ್ದುವು.

ಎಂಟನೆ ವರ್ಗದ ಸರಕಾರಿ ಪರೀಕ್ಷೆಯು ಸಮೀಪಿಸಿತ್ತು. ವಿದ್ಯಾರ್ಥಿಗಳು ಪರಿಶ್ರಮಪೂರ್ವಕವಾಗಿ ಅಭ್ಯಸಿಸತೊಡಗಿದರು—ಆಗತಾನೇ ತಮ್ಮ ನಿದ್ರೆಯಿಂದ ಎಚ್ಚರವಾದಂತೆ ಪರಸ್ಪರ ವಿಚಾರವಿನಿಮಯವೂ ನಡೆಯತೊಡಗಿತು. ಆದರೂ ರಾಜು-ಮಂಜು ಒಂದಾಗಲಿಲ್ಲ. ಅವರವರ ಮರ್ಜಿಗೆ ಅವರವರು ದೃಢವಾಗಿ ಅಂಟಿಕೊಂಡಿದ್ದರು. ಇಬ್ಬರಲ್ಲೂ ಓದಿನ ಬಗ್ಗೆ ಸ್ಪರ್ಧೆ ನಡೆಯುತ್ತಿರುವಂತೆ ಭಾಸವಾಗತೊಡಗಿತು.

ರಾಜು-ಮಂಜುರವರು ಒಂದೇ ಊರಿನವರು ಮಾತ್ರವಲ್ಲ; ನೆರೆ ಮನೆಯವರು. ಮನೆಯಿಂದ ಒಂದೇ ದಾರಿಯಲ್ಲಿ ಬರುತ್ತಿರುವವರು; ಅದೇ ಕಿರುದಾರಿಯಲ್ಲಿ ಮರಳುವವರು. ಆದರೆ, ಒಬ್ಬರೊಡನೆ ಇನ್ನೊಬ್ಬರು ಕಳೆದ ಮೂರು ವರ್ಷಗಳಲ್ಲಿ ಚಕಾರನುಡಿಯೆತ್ತಿದವರಲ್ಲ. ಆಕಸ್ಮಿಕವಾಗಿ ಎಲ್ಲಿಯಾದರೂ ಎದುರ್ಗೊಳ್ಳುವ ಪ್ರಸಂಗ ಬಂದರೆ, ಅವರು ಹಾವು ಕಡಿದವರಂತೆ ನಿಶ್ಚೇಷ್ಟಿತರಾಗುತಿದ್ದರು! ಗೋಪಾಲ ಮಾಸ್ತರರಿಗೆ ಇದನ್ನೆಲ್ಲಾ ಕೇಳಿ, ಕಂಡು ವಿಚಿತ್ರವೆನಿಸಿತು. ಆ ದುರ್ದಿನಕ್ಕೆ ಮೊದಲು ಅನ್ಯೋನ್ಯರಾಗಿ ನಡೆದುಬಂದಿದ್ದ ಅವರನ್ನು ಈ ರೀತಿಯಾಗಿ ಬೇರ್ಪಡಿಸುವ ಆ ಚೆಂಡು ಅದೆಷ್ಟು ಪ್ರಭಾವಶಾಲಿಯಾಗಿರಬೇಡ ಎಂದವರು ಮೂಗಿನ ತುದಿಗೆ ಬೆರಳೇರಿಸಿದರು. ಈ ರೀತಿಯ ವರ್ತನೆಯನ್ನು ತಡೆಯಬೇಕು ಎಂಬ ಅವ್ಯಕ್ತ ಪ್ರೇರಣೆಯು ಅವರಲ್ಲಿ ಉಂಟಾಯಿತು.

ಗೋಪಾಲಯ್ಯನವರ ಮನಸ್ಸು ದೃಢವಾದುದು. ಹಿಡಿದ ಕೆಲಸವನ್ನು ಪೂರೈಸದೆ ಅವರೆಂದೂ ಸುಮ್ಮನುಳಿದವರಲ್ಲ ಈ ಸಹಾಧ್ಯಾಯಿಗಳ ಭಿನ್ನಾಭಿಪ್ರಾಯ ಸಮಸ್ಯೆಗೆ ಉತ್ತರವರಸುವುದರಲ್ಲೇ ಅವರು ಚಿಂತಿಸ ತೊಡಗಿದರು. ಒಡೆದ ಗಡಿಗೆ ಮಣ್ಣಿನದ್ದಾಗಿದ್ದರೆ, ಅದನ್ನು ಕೂಡಿಸುವುದು ಎಂದಿಗಾದರೂ ಸಾಧ್ಯವೆ? ಸರ್ವಥಾ ಅಸಾಧ್ಯ. ಆದರೂ 'ಸಾಧಿಸಿದರೆ ಸಬಳ ನುಂಗಬಹುದು' ಎಂದವರ ಅಂತರಾತ್ಮ ನುಡಿಯುತಿತ್ತು. ಈ ಸಾಧನೆ ನಡೆಯಬೇಕಾದ ದಾರಿಯಾದರೂ ಯಾವುದು? ಗೋಪಾಲಯ್ಯನವರ ತಲೆಯಲ್ಲಿ ಒಂದು ವಿಚಿತ್ರ ಭೂತ ಸಂಚರಿಸುವುದಕ್ಕೆ ತೊಡಗಿತು.

ಪರೀಕ್ಷೆಗಳಿಗೆ ಬಹಳಷ್ಟು ದಿನಗಳುಳಿದಿಲ್ಲವೆಂದಾಗ ವಿದ್ಯಾರ್ಥಿಗಳು ಅಧ್ಯಾಪಕರನ್ನು ಸತ್ಕರಿಸಿ, ತಾವು ಪರೀಕ್ಷೆಗಳಲ್ಲಿ ಯಶಸ್ವಿಯಾಗುವಂತೆ ಆಶೀರ್ವದಿಸಬೇಕೆಂದೂ ಇದುವರೆಗೆ ಮಾಡಿರಬಹುದಾದ ಅಪರಾಧಗಳನ್ನು ಕ್ಷಮಿಸಬೇಕೆಂದೂ ಕೇಳಿಕೊಳ್ಳುವುದು; ಅಧ್ಯಾಪಕರು ಸಂತುಷ್ಟರಾಗಿ ಅವರ ಕೇಳಿಕೆಗಳನ್ನು ಮನ್ನಿಸಿರುವುದಾಗಿ ಹೇಳಿ ಶುಭಕಾಮನೆಗಳನ್ನು ಅರ್ಪಿಸುವುದೂ ಸತ್ ಸಂಪ್ರದಾಯವಾಗಿ ಬಂದಿರುವ ಸಮಾರಂಭ. ಈ ವರ್ಷವೂ ಈ ಮಾದರಿಯ ಸಭೆಯೊಂದು

ನಡೆಯಬೇಕೆಂದು ನಿರ್ಧಾರವಾಗಿತ್ತು. ಎಂದರೆ, ಅನುರಾಗಕ್ಕಿಂತ ಸಂಪ್ರದಾಯ ಮುರಿಯಬಾರದು ಎಂಬ ಕಾರಣದಿಂದ. ಅದಕ್ಕೆ ದಿನವೂ ನಿಶ್ಚಿತವಾಗಿತ್ತು. ಅಧ್ಯಾಪಕರಿಗೆಲ್ಲ ಅಕ್ಕರೆಯ ಕರೆಯೋಲೆ ಸುತ್ತೋಲೆಯ ರೂಪದಲ್ಲಿ ಹೊರಟಿತ್ತು ರಾಜುವೇ ಕಾರ್ಯಕ್ರಮ ಸಂಯೋಜಕನ ಪಾತ್ರ ವಹಿಸಿದ್ದ.

ರಾಜು ಗೋಪಾಲಯ್ಯನವರ ಬಳಿಗೆ ಬಂದು ನಮಸ್ಕರಿಸಿ, ಸುತ್ತೋಲೆಯನ್ನವರ ಕೈಗಳಲ್ಲಿಟ್ಟ. ಮಾಸ್ತರರು ಅದನ್ನು ಒಂದರೆ ಕ್ಷಣದೊಳಗೆ ಓದಿ, ರಾಜುವಿನ ಮುಖವನ್ನೇ ನೋಡತೊಡಗಿದರು. ಆತ ತಲೆ ತಗ್ಗಿಸಿದ—ಆ ತೀಕ್ಷ್ಣ ನೋಟದ ಉರಿಯನ್ನು ತಾಳಲಾರದೆ. ಸುತ್ತೋಲೆ ತನ್ನ ಕೈಗೆ ಒಂದುಬಾರಿ ಬಂದಿದ್ದರೆ, ಮುಂದೆ ನೆಟ್ಟಗೆ ಇಳಿದು ದೂರ ಹೋಗಬಹುದಿತ್ತು. ಆದರೆ ಅದಿನ್ನೂ ಅಧ್ಯಾಪಕರ ವಶದಲ್ಲಿಯೇ ಇರುವುದು. ರಾಜು ತಬ್ಬಿಬ್ಬಾದ.

ಗೋಪಾಲಯ್ಯನವರು ರಾಜುವನ್ನು ಪ್ರಶ್ನಿಸಿದರು—"ನೀವು ಯಾರೆಲ್ಲಾ ಸೇರಿ ಈ ಸಮಾರಂಭವನ್ನು ಏರ್ಪಡಿಸುತ್ತೀರಿ?"

"ಎಲ್ಲ ವಿದ್ಯಾರ್ಥಿಗಳೂ ಒಟ್ಟು ಸೇರಿ"

"ಮಂಜುನಾಥ ಕೂಡ ಇದ್ದಾನೆಯೇ?"

"ಹೌದು."

ರಾಜುವಿನ ಕೈಗೆ ಸುತ್ತೋಲೆಯೀಯುತ್ತ ಅವರು ತಲೆಯಾಡಿಸಿದರು. ಆತಗೆ ಸಾವಿನ ದವಡೆಯಿಂದ ಮರಳಿ ಬಂದಷ್ಟು ಆನಂದವಾಯಿತು. ಗೆದ್ದೆನೆಂಬ ಒಣ ಹೆಮ್ಮೆಯಿಂದ ಅವನು ಮುಂದುವರಿದ.

ಸತ್ಕಾರದ ಹಿಂದಿನ ದಿನ ಯಾರೋ ಒಬ್ಬ ವಿದ್ಯಾರ್ಥಿ ಗೋಪಾಲ ಮಾಸ್ತರರು ರಾಜುವನ್ನು ಕರೆಯುತ್ತಾರೆ ಎಂದು ಹೇಳಿ ಹೋದ. ರಾಜು ಮಾಸ್ತರರೊಡನೆ ಮಾತಾಡಿ ಹೊರಬಂದ; ಆತನ ಮುಖ ಕಾಣುವಾಗ ಒಂದು ಸಮಸ್ಯೆಯು ತಲೆ ಹೊಕ್ಕಿದಂತೆ ಭಾಸವಾಯಿತು. ಆದರೆ, ಅದೇನೆಂದು ಕೇಳುವ ಶಕ್ತಿ ಯಾರಲ್ಲೂ ಇರಲಿಲ್ಲ. ಮತ್ತೂ ತುಸು ಹೊತ್ತಾದನಂತರ ಮಂಜುನಾಥನಿಗೆ ಆಫೀಸ್ ರೂಮಿನಿಂದ ಕರೆ

ಬಂತು. ಆತನೂ ತೆರಳಿ ಮರಳಿದ; ಅವನ ಛಾಯೆಯೂ ವಿವರ್ಣ ಗೊಂಡಂತಿತ್ತು. ಏನೆಂದು ಅವನಿಗೂ ತಿಳಿಯದು.

ತರಗತಿ ತುಂಬ ಗುಲ್ಲು. ರಾಜು ಮತ್ತು ಮಂಜುಗಳಿಗೆ ಏನೋ ಗದರಿಸಿದರೆಂದು. ಇದೇನೂ ಹೆಚ್ಚಿನದಲ್ಲ. ಆಫೀಸ್ ಕೋಣೆಯೊಳಗೆ ಪೆಟ್ಟು ತಿನ್ನುವುದಕ್ಕಾಗಿಯೇ ಹೋಗುವುದೆಂದು ವಿದ್ಯಾರ್ಥಿಗಳ ತರ್ಕ ವಾದ. ಅದು ಸೆರೆಮನೆ, ನ್ಯಾಯಾಲಯ. ದಂಡನಾಲಯವೂ ಹೌದು.

ಅಂದು ಸಂಜೆ. ಗೋಪಾಲ ಮಾಸ್ತರರ ಮನೆಯ ಎದುರಿನ ಬಯಲು. ಬೇಸಗೆಯಾದುದರಿಂದ ಕೇವಲ ಒಣಗದ್ದೆಗಳು. ತೆವರಿ ಯಲ್ಲಿ ನಡೆಯುವ ಬೇಸಾಯಕಾಲವಲ್ಲವಾದುದರಿಂದ ನಡುಗದ್ದೆಯಲ್ಲಿ ಬಿಳಿಯಾದ ದಾರಿ ನಿರ್ಮಾಣಗೊಂಡಿತ್ತು. ಒಬ್ಬ ಗಿಡ್ಡಿರ ಹುಡುಗ ಅದೇ ದಾರಿಯಲ್ಲಿ ಮಾಸ್ತರರ ಮನೆಯನ್ನು ಸೇರಿದ. ಮಾಸ್ತರರು ಮನೆಯಲ್ಲಿಲ್ಲವಾದುದರಿಂದ ಅಲ್ಲೇ ಚಾವಡಿಯ ಬೆಂಚೊಂದರಲ್ಲಿ ಕುಳಿತ—ಆದೇಶದಂತೆ.

ತುಸು ಹೊತ್ತಿನ ನಂತರ, "ಮಾಸ್ತರರಿದ್ದಾರೆಯೋ" ಎಂಬ ಒಂದು ಸ್ವರ ಬಾಗಿಲಿನ ಹೊರಗೆ ಕೇಳಿಸಿತು. ಆ ಬಾಲಕನಿಗೆ ಈ ಸ್ವರವನ್ನು ಎಲ್ಲಿಯೋ ಕೇಳಿದ್ದ ನೆನಪಾಗುತಿತ್ತು. ಆದರೆ ಎಲ್ಲಿ ಎಂದು ಮಾತ್ರ ಸ್ಮರ ಣೆಗೆ ಬರಲಿಲ್ಲ. "ಇಲ್ಲ" ಎಂದು ಬಿಟ್ಟ ಹಿಂದೆಮುಂದೆ ನೋಡದೆ. ಬೆನ್ನ ಲ್ಲಿಯೇ ಯಾರೆಂದು ಕಾಣುವ ಆತುರದಿಂದ ಆತ ಬಾಗಿಲ ಬಳಿಗೆ ಬರು ತ್ತಿದ್ದ. ಅಷ್ಟರಲ್ಲಿಯೇ ಹೊರಗಿದ್ದ ವ್ಯಕ್ತಿ ಪುನಃ ಕೇಳಿತು— "ಎಲ್ಲಿ ಹೋಗಿದ್ದಾರೆ? ಬರಲು ತಡವಾದೀತೇ" ಈ ಮಾತಿನ ಅಲೆಗಳು ಆತನ ಕಿವಿ ಹೋಗುವುದರಲ್ಲಿಯೇ ಬಾಗಿಲ ಬಳಿ ಸಮೀಪಿಸಿದ್ದ ಆತ ನೋಡು ತ್ತಾನೆ! ತನ್ನ ಮುಂದೆ ಬಾಗಿಲ ಮರೆಯಲ್ಲಿ ಮಂಜುನಾಥ ನಿಂತಿದ್ದಾನೆ. ಒಂದುಕ್ಷಣ ಇಬ್ಬರಿಗೂ ಧೃತಿತಪ್ಪಿತು. ಮುಂದೇನು ಮಾಡಬೇಕೆಂದು ಅವರಿಬ್ಬರೂ ಅರಿಯದಾದರು. "ಮಂಜು…ನೀನು…ಇಲ್ಲಿ…." ಎಂಬ ಮೂರು ಮಾತ್ರೆಯ ಮೂರು ನುಡಿಗಳು ಅವನ ಬಾಯಿಯಿಂದ ಆತನಿ ಗರಿವಿಲ್ಲದಂತೆ ಹೊರಬಿದ್ದುವು. "ರಾಜೂ" ಎಂಬ ನುಡಿ ನಾಲ್ಕುಮಾತ್ರೆ

ಯದಾಗಿ ಮಂಜುವಿನ ತುಟಿಗಳ ಕದವನ್ನು ತೆರೆದು ಗಾಳಿಯಲ್ಲಿ ತೇಲಿ ಬಂದುವು.

"ಬಾ, ಒಳಗೆ ಬಾ. ಈಗ ಬಂದಾರು"—ರಾಜುವಿನ ಉತ್ತರ.

"ರಾಜು" ನೀನೂ ಇಲ್ಲಿಗೆ ಬಂದಿರುವೆಯಲ್ಲಾ ?"

"ಮಾಸ್ತರರು ಬರಲು ಹೇಳಿದ್ದರು. ಬಂದೆ. ಅವರಿಲ್ಲ ಎಂದರು ಮನೆಯವರು. ಕೂತೆ. ಅಷ್ಟರಲ್ಲಿ..."

"ನನಗೂ ಬರುವಂತೆ ಆದೇಶಿಸಿದ್ದರು. ಇಲ್ಲಿ ಬಂದರೆ...." ಮಂಜುವಿನ ನಾಲಗೆ ತಡವರಿಸಿತು.

"ಉತ್ತರ ದಕ್ಷಿಣ ಧ್ರುವ ಸಂಗಮವಾಯಿತು" ಎಂದಾವಾಕ್ಯವನ್ನು ಪೂರ್ಣಗೊಳಿಸುತ್ತ ಗೋಪಾಲ ಮಾಸ್ತರರು ಹಟ್ಟಿಯ ಬಾಗಿಲಿನಿಂದ ಚಾವಡಿಗೆ ಬಂದು ನಿಂತರು.

ಪಡುಗಡಲ ಸೀರಿನೊಡನೆ ಓಕುಳಿಯಾಡುತಿದ್ದ ಭಾಸ್ಕರದೇವ ದಣಿದು ಮರೆಯಾದನು. ಆಕಾಶದಲ್ಲಿ ಅನಂತ ನಕ್ಷತ್ರಗಳು ಕಾಣಿಸಿಕೊಂಡುವು. ಮಾಸ್ತರರು ರಾಜು ಮಂಜುರವರೊಡನೆ ಏನೇನೆಲ್ಲಾ ಆಡಿದರೋ ಆ ಮೂವರಿಗೂ ತಿಳಿದಿರಲಾರದು. ರಾತ್ರೆ ಗೋಪಾಲ ಮಾಸ್ತರರು ಅವರಿಬ್ಬರನ್ನೂ ಅವರವರ ಮನೆಗಳಿಗೆ ಕಳಿಸಿಬಂದು ಸಮಾಧಾನದ ನಿಟ್ಟುಸುರು ಬಿಡುತ್ತಿರುವುದು ಮಾತ್ರ ಆ ಮಧುಮಾಸ ಪ್ರಾರಂಭದಲ್ಲಿ ಕಳೆದುಕೊಂಡ ಕಾದಲನನ್ನು ಪಡೆದ ವಿರಹಿಯ ನಾಸಾಪುಟದಿಂದ ಹೊರಬರುವ ಸಮಾಧಾನದ ನಿಟ್ಟುಸಿರಂತೆ ಆನಂದದಲ್ಲಿ ಲೀನವಾಯಿತು.

ರಾತ್ರೆ ಬೆಳಗಾಯಿತು. ಬೆಳಗುಕಳೆದು ಮಧ್ಯಾಹ್ನ, ಅದೂ ದಾಟಿ ಸಂಜೆ. ಶಾಲೆಯಲ್ಲಿ ಸಡಗರ. ಮೂರು ವರ್ಷಗಳಿಂದ ಮುಖ ತಿರುಗಿಸಿಕೊಳ್ಳುತಿದ್ದ ಮಂಜು—ರಾಜುರವರ ಇಂದಿನ ಸಹಚರತ್ವವೆಲ್ಲರನ್ನೂ ಅಚ್ಚರಿಗೊಳಿಸಿತು. ರಾತ್ರೆ ಬೆಳಗಾಗುವುದರೊಳಗೆ ಇದೆಂತಹ ಅದ್ಭುತ ನಡೆಯಿತು! ಸಮಾರಂಭದಲ್ಲಿ ಮಾತನಾಡಿದ ರಾಜು ಹೇಳಿದ—"ಆಫೀಸು ಕೋಣೆಗೆ ಹೋಗುವುದೆಂದರೆ ಎಲ್ಲರ ಕೈಕಾಲುಗಳೂ ನಡುಗುತ್ತವೆ. ಪ್ರಾಯಃ ಇದಕ್ಕೆ ಕಾರಣ ನಾವು ಅದನ್ನು ಸರಿಯಾಗಿ ಅರ್ಥಮಾಡಿಕೊಳ್ಳದೆ ಹೋದುದು. ಅದು ಜೇಲಲ್ಲ; ದಂಡ

ನಾಲಯವೂ ಅಲ್ಲ. ಅದು ಪರಮ ಪವಿತ್ರವಾದ "ನ್ಯಾಯಾಲಯ" ಈ ಮಾತನ್ನು ನನ್ನ ಅನುಭವದಿಂದಲೇ ಹೇಳುತಿದ್ದೇನೆ. ಇಂತಹ ಆದರ್ಶ ನ್ಯಾಯಾಲಯವನ್ನು ಪಡೆದ ನಮ್ಮ ಶಾಲೆಯನ್ನೂ, ನ್ಯಾಯಾಲಯವು ನಮಗಿತ್ತ ಅಮರ ಪಾಠವನ್ನೂ ನಾನೆಂದೂ ಮರೆಯಲಾರೆ."

ಮಂಜು ಎದ್ದು ಕಣ್ಣೊರಸಿಕೊಂಡು ನುಡಿದ: "ಈಗ, ನನ್ನ ಮಿತ್ರ ರಾಜು (ಎಲ್ಲರಿಗೂ ಸಖೇದಾಶ್ಚರ್ಯ!) ಹೇಳಿದ ಮಾತನ್ನು ಅಕ್ಷರಶಃ ಒಪ್ಪುತ್ತೇನೆ. ನನ್ನ ಜೀವನದಲ್ಲಿ ಮಹತ್ವದ ಪಾಠವಿತ್ತು ನನ್ನ ಬದುಕಿಗೆ ಆದರ್ಶವನ್ನು ಹಾಕಿಕೊಟ್ಟ ಈ ಶಾಲೆಯನ್ನು ಅದರಲ್ಲೂ ಆದಕ್ಕೆ ಪ್ರೇರಕವಾದ ಆಫೀಸು ಕೋಣೆಯನ್ನು ಸದಾ ಸ್ಮರಿಸುವೆ."

ವಿದ್ಯಾರ್ಥಿಗಳೂ ಅಧ್ಯಾಪಕರೂ ಚಕಿತಚಿತ್ತರಾಗಿ ಆಲಿಸುತಿದ್ದರು. ಮೂವರು ಮಾತ್ರ ಕಣ್ಣೀರು ಸುರಿಸುತ್ತಿದ್ದರು. ಈ ತ್ರಿಮೂರ್ತಿಗಳು ಬೇರಾರೂ ಆಗಿರದೆ ಗೋಪಾಲ ಮಾಸ್ತರರು ರಾಜು ಮತ್ತು ಮಂಜು ಆಗಿದ್ದರು. ಅವರು ಸುರಿಸುತಿದ್ದುದು ಪ್ರೇಮರಸಪಾಕದಿಂದ ಜಿನುಗಿದ ಸೋನೆಗಳಾಗಿದ್ದುವು. ಉಕ್ಕಿನ ತೆರೆ ಪಕ್ಕಕ್ಕೆ ಸರಿದುಹೋಗಿತ್ತು. ಒಡೆದ ಗಡಿಗೆ ಬೆಸೆದುನಿಂತಿತ್ತು.

## ೪ ಮುನಿಸು ಮುರಿದ ಮಾರಿ

ಕೆರೆಯಿಂದ ಸೇದಿ ನೀರುಣಿಸಿದ್ದ ಬಾಯಾರಿದ ಗದ್ದೆಯು ಹಚ್ಚನೆ ಹಸುರಿನಿಂದ ಕೂಡಿ ಆನಂದದಿಂದ ಕುಣಿದಾಡುತಿತ್ತು. ಅದರೊಡನೆಯೇ ಆ ಗದ್ದೆಗೆ ತನ್ನ ರಕ್ತ ಮತ್ತು ಬೆವರುಗಳನ್ನು ಒಂದಾಗಿಸಿ ದಿನ ರಾತ್ರಿಯೆನ್ನದೆ ನೀರುಣಿಸಿದ ಆದರ ಸ್ವಾಮಿಯ ಮನಸ್ಸೂ ಪ್ರಪುಲ್ಲಿತವಾಗಿತ್ತು. ಅಲ್ಲದೇ ತಾನು ಮಗುವಿನಂತೆ ಸಾಕಿ ಬೆಳೆಸಿದ ಪೈರಗದ್ದೆಯನ್ನು ಕಂಡು ಆತನ ಹೃದಯವೂ ನರ್ತಿಸಲಾರಂಭವಾಗುತ್ತಿತ್ತು. ಮಂಗಲನು ಪ್ರಸನ್ನನಾಗಿದ್ದನು. ಅವನ ಗದ್ದೆಯು ತನ್ನ ಪರಿಶ್ರಮಕ್ಕೆ ಸರಿಯಾದ ಉತ್ಪಾದನೆಯನ್ನೀಯಲು ಸಿದ್ಧವಾಗುತಿತ್ತು. ತನ್ನ ಪರಿಶ್ರಮವು ಸಾರ್ಥಕಗೊಂಡು ಬಂದ ಫಲದಿಂದ ತನ್ನ ಮನೆತುಂಬ ತುಂಬಿಸಿಕೊಂಡನೆಂದರೆ, ಮಂಗಲನು ನಿಶ್ಚಿಂತೆಯಿಂದ ಹಬ್ಬವನ್ನಾಚರಿಸಬಲ್ಲನು. ಮಂಗಲ, ಆವನ ಪತ್ನಿ, ಮಕ್ಕಳು ಎಲ್ಲರೂ ಸಂತುಷ್ಟರಾಗಿಯೇ ಇದ್ದರು.

ಎಂದಿನಂತೆ ನಸುಕಿನ ಹೊತ್ತಿನಲ್ಲಿ ಮಂಗಳ ತನ್ನ ಗದ್ದೆಯತ್ತ ನೋಡಿಕೊಂಡು ಹೊರಟನು. ಮನೆಯ ಜಗಲಿಯನ್ನಿಳಿಯುತ್ತಿರುವಾಗಲೇ ಆತನ ಪತ್ನಿ ಮಾಲತಿ ಕರೆದಳು. ತನ್ನ ಮನದನ್ನೆಯ ಕರೆಯನ್ನು ನಿರಾಕರಿಸಲಾರದೆ ಮಂಗಳನು ಹಿಂದಕ್ಕೆ ಹೋಗಿ, ಆಕೆಯನ್ನು ವಿಚಾರಿಸಿದನು. ಮಗುವಿಗೆ ಅಲ್ಪಸ್ವಲ್ಪ ಜ್ವರ ಕಾದಿತ್ತು. ಮೂರು ಹೆಣ್ಣುಮಕ್ಕಳಾದ ಮೇಲೆ ಹುಟ್ಟಿದ ಈ ಗಂಡು ಮಗುವಿಗೆ ಎಲ್ಲಿಯಾದರೂ ದುರ್ದೈವದಿಂದ ಹಾನಿ ತಟ್ಟೀತೆಂದಾಕೆ ಬೆದರಿದ್ದಳು. ಹೆದರಿ ಭಯಭೀತಳಾದ ಮಾಲತಿಯನ್ನು ಸಮಾಧಾನಪಡಿಸಿ, ತಾನು ಹಿಂತಿರುಗಿ ಬರುವಾಗ ವೈದ್ಯರ ಭೇಟಿ ಮಾಡುವೆನೆಂದು ಭರವಸೆಯಿತ್ತು ತನ್ನ ದಾರಿ ಹಿಡಿದನು ಮಂಗಳ.

ದಾರಿಯನ್ನು ತುಳಿಯುತಿದ್ದಂತೆಯೇ ಮಂಗಳನ ಮನಸ್ಸು

ಬೇರೊಂದೆಡೆಗಾತನನ್ನು ಒಯ್ದಿತು. ತನ್ನ ಬಡತನದ ಸಂಸಾರ, ಮಡದಿ ಮಾಲತಿಯ ಗೃಹಿಣಿತ್ವ, ನಾಲ್ಕು ಮಕ್ಕಳು ಆದರಲ್ಲೂ ಮೊದಲ ಮೂರು ಹೆಣ್ಣು! ಅವುಗಳ ಮದುವೆಗಾಗಿ ವರ ಶೋಧನೆಗಾಗಿ ಪಡಬೇಕಾದ ಭವಣೆಗಳು! ಹೀಗೆಯೇ ಕಂಬಿ ಇಲ್ಲದ ರೈಲಿನಂತೆ ಓತಪ್ರೋತವಾಗಿ ಮುಂದುವರಿಯಿತು. ಇವನ್ನು ಯೋಚಿಸುತಿದ್ದಂತೆಯೇ ಆತನ ತಲೆಯು ಭಾರವಾಯಿತು; ಕಣ್ಣು ಕತ್ತಲೆ ಬಂದಂತಾಯಿತು; ಎಡತೋಳು ಕಂಪಿಸತೊಡಗಿತು; ಎಡಗಣ್ಣು ಅದುರಿತು! ಸ್ವಲ್ಪ ಹೊತ್ತು ಮುಂದು ವರಿದಂತೆ, ಆತನು ತನ್ನ ಗದ್ದೆಯ ಸಮೀಪಕ್ಕೆ ಬಂದು ನಿಂತುಬಿಟ್ಟನು.

ಪಾಪ, ನಳನಳಿಸಿ ಕುಣಿದಾಡಿ ಒಲೆಯುತ್ತಿದ್ದ ಭತ್ತದ ಸಸಿಗಳು ಇಂದು ನೆಲಸಮವಾಗಿ ಹೋಗಿವೆ! ಗದ್ದೆಯ ಪೈರು ನಾಶವಾಗಿ ಬಿಟ್ಟದೆ! ಯಾವುದೋ ಕ್ರೂರ ವನ್ಯ ಮೃಗಗಳ ಸಂಕುಲವೇ ಮಂಗಳನ ಗದ್ದೆಗೆ ದಾಳಿಯಿಟ್ಟು ಪೈರನ್ನು ಕಬಳಿಸಿರಬೇಕು ಅಥವಾ ಯಾರೋ ಕಳ್ಳರು ಪೈರನ್ನು ಕೊಯ್ದುಕೊಂಡು ಹೋಗಿರಬೇಕು! ಎಂತಹ ಆಪತ್ತು! ತಾನು ಎದ್ದ ಗಳಿಗೆಯೇ ಅಶುಭವೆಂದು, ಎಡ ಪಕ್ಕದಿಂದ ಎದ್ದಿರ ಬೇಕೆಂದು, ತನ್ನ ಮಡದಿ ತಾನು ಹೊರಟ ಮೇಲೆ ಹಿಂತಿರುಗಿ ಬರು ವಂತೆ ಕೇಳಿಕೊಂಡಿಳೆಂದು— ಹಾಗೂ ಮುಂದಿನ ತನ್ನ ಅಶುಭ ಲಕ್ಷ ಣಗಳೆಂದು ಆತನ ಮನಸ್ಸು ಅಲ್ಲೋಲ ಕಲ್ಲೋಲವಾಯಿತು! ತಾನು ಇದುವರೆಗೆ ಪ್ರಯಾಸಪಟ್ಟು ಅಹರ್ನಿಶಿ ದುಡಿದು ಬೆಳೆಸಿದ ಕೃಷಿ ಕೈಗೆ ಬರುವ ಹೊತ್ತಿನಲ್ಲಿ ವಿಧಿಯ ಅಪಕೃಪೆಯಿಂದಾಗಿ ನಾಶ ವಾಗಲು ಪ್ರಾರಂಭವಾಗಿತ್ತು! ಇನ್ನೂ ಇದೇ ರೀತಿ ಹಾಳಾಗುತ್ತ ಬಂದರೆ, ಮುಂದಿನ ಮಳೆಗಾಲ ದಿನದೂಡುವುದೆಂತು?

ಈ ಪ್ರಶ್ನೆಗೆ ತಕ್ಕ ಉತ್ತರ ಸಿದ್ಧವಾಗಿರಲಿಲ್ಲ. ಮಂಗಳ ಏನೇ ನನ್ನೋ ಕಲ್ಪಿಸಿ, ಯೋಚಿಸಿ ಮನೆಗೆ ಹಿಂತಿರುಗಿದ. ತಾನು ಮಡ ದಿಗೆ ಇತ್ತ ಮಾತೂ ಅವನ ಸ್ಮರಣೆಗೆ ನಿಲುಕಲಿಲ್ಲ.

ಕೆಲ ದಿನಗಳು ಸಂದುವು. ಮಂಗಳನ ಹಾಗೂ ಅವನ ಸುತ್ತು ಮುತ್ತಲಿನ ಗದ್ದೆಗಳಲ್ಲಿ ಪೈರು ಕಾಣೆಯಾಗುತ್ತ ಬರುತಿತ್ತು; ಊರಲ್ಲಿ ರಾತ್ರಿಯ ಕಾಲದಲ್ಲಿ ಜನಪಾದದ ಸಪ್ಪಳ; ಪಿಸು ಪಿಸು ಮಾತು ಕೇಳಿ

ಬರತೊಡಗಿತ್ತು. ಅಜ್ಞಾನಾಂಧಕಾರದಲ್ಲಿ ಮುಳುಗಿದ್ದ ಜನತೆಯ ಮನಃಪಟಲದಲ್ಲಿ ಅಲ್ಲ ಸಲ್ಲದ ಕಲ್ಪನೆಗಳು ಹಾಯ್ದುಹೋದುವು. ಭೂತ ಪ್ರೇತ ಪಿಶಾಚಿಗಳು ಗ್ರಾಮದಲ್ಲಿ ಸಂಚಾರ ಮಾಡತೊಡಗಿವೆಯೆಂದೂ, ಅವುಗಳನ್ನು ತೃಪ್ತಿಪಡಿಸುವುದು ಅಗತ್ಯವೆಂದೂ ಭಾವಿಸಿ, ಊರ ಮಹಾಮೇಧಾವಿ ವೃದ್ಧರು ಹಗಲು ಹೊತ್ತಿನಲ್ಲಿ ಮನೆ ಮನೆ ತಿರುಗಾಡಿ ಮನೆಯೊಡತಿಯರಲ್ಲಿ ವಿನಂತಿ ವಿಜ್ಞಾಪನೆ ಮಾಡತೊಡಗಿದರು.

ಈ ಮುದುಕರ ಊಹೆಗೂ ಕಾರಣವಿಲ್ಲದಿಲ್ಲ. ಊರ ಮಾರಿಗೆ ವರ್ಷಂಪ್ರತಿ ಒಂದು ದಿನ ಮಾಂಸಾಹಾರವೀಯುವುದು ಊರ ಪದ್ಧತಿಯಾಗಿತ್ತು. ಅಂದು ಕೋಳಿ, ಕುರಿಗಳಿಂದ ಹಿಡಿದು ಕೋಣಗಳ ವರೆಗೂ ಮಾರಿದೇವಿಯ ಪ್ರೀತ್ಯರ್ಥವಾಗಿ ಬಲಯೀಯಲ್ಪಡುತಿದ್ದುವು ಆದರೆ, ಈಗ್ಗೆ ಒಂದೆರಡು ವರ್ಷಗಳಿಂದ ಪ್ರಾಣಿಗಳನ್ನು ಬಲಿಕೊಡುವುದು, ಸರಿಯಲ್ಲ; ಆದರಿಂದ ದೇವದೇವತೆಗಳಿಗೆ ತೃಪ್ತಿಯಾಗಲಾರದು ಎಂಬ ಅಭಿಪ್ರಾಯ ತುಂಬಿದ ನವಯುವಕರಲ್ಲಿ ಕೆಲವರ ಬಲಾತ್ಕಾರ ಹಾಗೂ ಸುಧಾರಣೆಯ ನೆವದಲ್ಲಿ ಈ ಬಲಿಯು ನಿಂತು ಹೋಗಿತ್ತು. ಇದರಿಂದಲೇ ಕುಪಿತಗೊಂಡ ಮಾರಿಯು ಗ್ರಾಮ ವಾಸಿಗಳಿಂದ ತನ್ನ ಪಾಲನ್ನು ಪಡೆಯುವ ಹಂಚಿಕೆಯನ್ನು ಮಾಡುತಿದ್ದಾಳೆಂದೂ ತಪ್ಪುಗೈದ ಊರವರನ್ನು ಈ ರೀತಿ ಶಿಕ್ಷಿಸುತ್ತಿರುವರೆಂದೂ ಗೋಪಾಳ ಬಿಡ ತೊಡಗಿದರು. ಅವರಿಗೆ ಕೆಲವರ ಸಂದೇಹಪೂರ್ಣ ಸಹಾನುಭೂತಿಯೂ ದೊರೆಯದೆ ಇರಲಿಲ್ಲ.

ಕೆಲವು ದಿನಗಳು ಕಳೆಯುತ್ತ ಬಂದುವು. ಗದ್ದೆಗಳಲ್ಲಿನ ಪೈರು ಮಾತ್ರವಲ್ಲದೆ ಊರವರ ಸೊತ್ತುಗಳೂ ಅದೃಶ್ಯವಾಗತೊಡಗಿದುವು ರಾಟೆ, ಆದರ ಹಗ್ಗದಿಂದ ಪ್ರಾರಂಭವಾದ ಈ ಇಂದ್ರಜಾಲ ಕೊಟ್ಟಿಗೆಯ ದನಕರುಗಳು, ಹೊರಗೆಯಿಟ್ಟ ಪಾತ್ರೆ ಪರಡಿ, ವಸ್ತ್ರ ಮೊದಲಾದುವುಗಳಿಗೂ ಸೋಂಕಿತ್ತು. ಅತ್ತ ಗದ್ದೆಯ ಪೈರಿನ ರಕ್ಷಣೆ, ಇತ್ತ ಮನೆ ಮಾರುಗಳ ಭದ್ರತೆ—ಇವುಗಳೆರಡನ್ನೂ ಸುಧಾರಿಸಿಕೊಳ್ಳುವುದು ಸಾಮಾನ್ಯ ಜನರಿಂದ ಅಸಾಧ್ಯವಾಗಿ ಪರಿಣಮಿಸಿತ್ತು ಮನೆ ಕಾಯುಲು

ನಿಂತರೆ ಗದ್ದೆಯ ಪೈರು ಕಾಣೆಯಾಗುತಿತ್ತು; ಹಾಗೆಂದು ಗದ್ದೆ ಯಲ್ಲಿಯೇ ಉಳಿದು ಬಿಟ್ಟರೆ, ಮನೆಯ ಗತಿ ದೇವರಿಗೇ ಗೊತ್ತು!

ಗ್ರಾಮಸ್ಥರೆಲ್ಲರೂ ಧರ್ಮ ಸಂಕಟದಲ್ಲಿ ತೊಳಲಾಡುತ್ತಿರುವಾಗ, ಮಾರಿಯಮ್ಮನನ್ನು ಶಾಂತಗೊಳಿಸುವ ಪ್ರಯತ್ನವೂ ಸಿಲ್ಲದೆ ಸಾಗಿತು. ಅಂಧವಿಶ್ವಾಸಿಗಳಲ್ಲಿ ಹೆಚ್ಚಿನವರು ಈ ನವೀನೋಪದ್ರವವನ್ನು ಕಡೆಗಾಣಿಸಲು ಒಪ್ಪಿಗೆಯಿತ್ತರು. ಹಿರಿಯರೆಲ್ಲರೂ ಮಾರಿಗುಡಿಯ ಮುಂದೆ ಸೇರಿ ತಮ್ಮ ಅಕ್ಷಮ್ಯಾಪರಾಧವನ್ನು ಮನ್ನಿಸಿ ಉದ್ಧರಿಸಬೇಕೆಂದೂ ತಾವು ಮನಃಪೂರ್ವಕವಾಗಿ ದೇವಿಗೆ ದ್ರೋಹ ಬಗೆಯಲಿಲ್ಲವೆಂದೂ ಆದುದರಿಂದ ತನ್ನ ಮಕ್ಕಳನ್ನು ಈ ರೀತಿಯಲ್ಲಿ ಉಗ್ರವಾಗಿ ಶಿಕ್ಷಿಸುವುದು ದೇವಿಗೆ ಉಚಿತವಲ್ಲವೆಂದೂ, ತಾವು ಮಾಡಿದ ಅಪರಾಧಕ್ಕೆ ತಕ್ಕ ಪ್ರಾಯಶ್ಚಿತ ವನ್ನು ಒಂದು ವಾರದೊಳಗೆ ಮಾಡುವುದೆಂದೂ ದೇವಿಗೆ ಭರವಸೆಯಿತ್ತು ಕೈ ಮುಗಿದು ವಿನಮ್ರರಾಗಿ ನಮಸ್ಕರಿಸಿ ದೇವಿಯ ಕಾಲಿಗೆರಗಿ ಪ್ರಾರ್ಥಿಸಿ ಕೊಂಡು, ಹಸನ್ಮುಖದಿಂದ ಮನೆಗಳಿಗೆ ತೆರಳಿದರು. ಆದರೆ, ಈ ವಿಶ್ವಾಸದಾನದಿಂದ ದೇವಿ ಮಾತ್ರ ಒಲಿದಂತೆ ತೋರಲಿಲ್ಲ. ಆ ದಿನ ರಾತ್ರಿ, ಈ ಪ್ರಾರ್ಥನೆ ಸಲ್ಲಿಸಿದವರ ನಾಯಕಮಣಿಯೊಬ್ಬನ ಗದ್ದೆ ಆದುವರೆಗೆ 'ದೇವಿ'ಗೆ ಆಹುತಿಯಾಗಿರಲಿಲ್ಲ—"ದೇವಿ" ಪ್ರವೇಶ ಮಾಡಿದಳು; ಜತೆಗೆ ಅಂಗಳದಲ್ಲಿ ಕಟ್ಟಿದ್ದ ಎತ್ತುಗಳ ಜೋಡಿಯೂ ಮಾಯವಾಗಿತ್ತು!

ದಿನೇ ದಿನೇ ದೇವಿಯ ಕೀಟಲೆ ಏರುತ್ತ ಹೋಯಿತೇ ವಿನಹ ಕಡಿಮೆಯಾಗಲಿಲ್ಲ. ಆರುದಿನ ಸಂದು ಏಳನೆಯ ಸೂರ್ಯೋದಯ ವಾಯಿತು. ಮಾರಿಗುಡಿಯಲ್ಲಿ ವೈಭವದ ಪೂಜೆ, ಪುರಸ್ಕಾರ—ಜತೆಗೆ ಮಹತ್ತರ ಬಲಿ. ಊರವರು ಶತ ಪ್ರಯತ್ನ ನಡೆಸಿ ಕೊಬ್ಬಿದ ಕೋಣ ಗಳನ್ನು ದೇವಿಯ ಪ್ರೀತ್ಯರ್ಥವಾಗಿ ಬಲಿಯೊಯಲು ತಂದಿದ್ದರು. ಅಂದು ಮಧ್ಯ ರಾತ್ರಿಯ ಸಮಯಕ್ಕೆ ಬಲಿಗಂಬದತ್ತ ಮೆರವಣಿಗೆಯು ಹೊರಡಲಿತ್ತು. ಇದಕ್ಕಾಗಿ ಆವಶ್ಯಕವಾದ ಪೂರ್ವ ಸಿದ್ಧತೆಗಳು ಭರ ದಿಂದ ಸಾಗತೊಡಗಿದ್ದವು. ಪುರುಷರೆಲ್ಲರೂ ಗುಡಿಯ ಸುತ್ತ ತಂತಮ್ಮ ಕಿರಿಯ ಕಾಣಿಕೆಗಳೊಡನೆ ಜಮೆಯಾಗುತಿದ್ದರು.

ಮಂಗಳನಿಗೂ ಈ ಬಲಿಯ ಯೋಚನೆ ನ್ಯಾಯವೆಂದು ಕಾಣದೆ ಹೋದರೂ, ಹಲವು ಪ್ರಯತ್ನದಲ್ಲಿ ಒಂದೆಂಬ ಭಾವನೆ ಉಂಟಾಗಿತ್ತು. ಆತ ನಿತ್ಯವೂ ಹಗಲು ಗದ್ದೆಗೆ ನೀರೆರೆಯುತ್ತಿದ್ದ; ರಾತ್ರಿ ಮನೆಯಲ್ಲಿ ಉಂಡು, ತಾನು ಗದ್ದೆ ಕಾಯಲು ತೆರಳುತಿದ್ದ. ಮನೆಯಲ್ಲಾದರೋ ದನಕರುಗಳನ್ನು ಭದ್ರವಾಗಿ ಕೊಟ್ಟಿಗೆಯಲ್ಲಿ ಕಟ್ಟಿ ಪಾತ್ರೆ ಪರಡಿ ಯೊಂದೂ ಹೊರಗುಳಿಯದಂತೆ ಮಾಡಿ, ಮಡದಿಗೆ ಧೈರ್ಯ ಹೇಳು ತಿದ್ದ. ಮಾಲತಿಯೂ ಎಲ್ಲಿಲ್ಲದ ಧೈರ್ಯವನ್ನು ತಂದು ಜಾಗರಣೆ ಯಿಂದಿರುತ್ತಿದ್ದಳು. ಆಗಾಗ, ಪಾದದ ಸಪ್ಪಳ, ನಾಯಿಗಳ ಕೂಗು, ಹುಲಿ, ಕಾಡು ಹಂದಿಗಳ ಆರ್ಭಟೆಗಳು ಕೇಳಿಬರುತಿದ್ದುವು. ಅವನ್ನು ಆಲಿಸಿದೊಡನೆಯೇ ಮಾಲತಿ ಒಮ್ಮೆಗೆ ಹೆದರಿಬಿಡುತಿದ್ದಳು. ಮರು ಕ್ಷಣದಲ್ಲಿ ಕತ್ತಿ, ಕೊಡಲಿ, ದೊಣ್ಣೆಗಳನ್ನು ಎದುರಲ್ಲಿಟ್ಟು ತನ್ನ ಮಕ್ಕಳನ್ನೂ ಪಶು ಪ್ರಾಣಿಗಳನ್ನೂ ಕಾದು ಕೂತುಕೊಳ್ಳುತಿದ್ದಳು. ಹೀಗೆ ಏರ್ಪಾಟು ನಡೆದ ದಿನದಿಂದ ಮಂಗಳನ ಗದ್ದೆಯಲ್ಲಾಗಲೀ ಮನೆ ಯಲ್ಲಾಗಲೀ ಯಾವುದೇ ಹಾನಿ ಒದಗುತಿದ್ದಿಲ್ಲ. ಇದರಿಂದಾಗಿ ಮಾಲ ತಿಗೂ ಮಂಗಳನಿಗೂ ಈ "ಮಾರಿಯ ಆಟ"ದ ಕುರಿತು ಕೊಂಚ ಅಶ್ರ ದ್ಧೆಯೂ ಹುಟ್ಟತೊಡಗಿತ್ತು. ಆದರೆ, ಊರವರ ಒತ್ತಾಯದಿಂದಾಗಿ, ಅವರೂ ಈ ಮಹೋತ್ಸವದಲ್ಲಿ ತಮ್ಮ ಪಾಲಿನ ದೇಣಿಗೆಯನ್ನು ಅವಶ್ಯ ಸಲ್ಲಿಸಬೇಕಾಗಿತ್ತು. ಆದಕ್ಕಾಗಿ ಎಲ್ಲಿಂದಲೋ ಬಂದು ಬೆಳೆದು ನಿಂತಿದ್ದ ಹುಂಜವೊಂದನ್ನು ಆರಿಸಿ ತಂದಿದ್ದನವನು.

ಆ ದಿನ ಕತ್ತಲ ಸಮಯ. ಮಂಗಳನು ತನ್ನ ಮನೆಯಲ್ಲಿ ಕುರುಡು ದೀಪದ ಮಂದ ಪ್ರಕಾಶದಲ್ಲಿ ಉಂಡು ಕೈತೊಳೆದು ಸೊಂಟಕ್ಕೆ ಗೇಣು ಬಟ್ಟೆಯನ್ನು ಕಟ್ಟಿ, ತಲೆಗೆ ಉದ್ದನ್ನೆಯ ರುಮಾಲು ಸುತ್ತಿ ತನ್ನ ಕಬ್ಬಿ ಣದ ಕಟ್ಟು ಹಾಕಿಸಿದ ಬಲವಾದ ದಂಟೆಯೊಂದನ್ನು ಆದರ ಶಕ್ತಿಯನ್ನಳೆ ಯುವವನಂತೆ, ವಾಡಿಕೆಯಂತೆ ನೆಲಕ್ಕೊಮ್ಮೆ ಬಡಿದು ಹೆಂಡತಿಗೆ ತನ್ನ ನಿರ್ಗಮನದ ಸೂಚನೆಯನ್ನು ಕೊಟ್ಟನು. ಮಾಲತಿ ಕೂಡಲೆ ಆವನೆ ದುರು ಕಾಣಿಸಿಕೊಂಡಳು.

"ಮಾಲತಿ, ನಾನು ಹೋಗಿ ಬರುತ್ತೇನೆ."

ಮಾಲತಿಗೆ ಬಲಿಯ ನೆನಪು ಬೇಡವೆಂದರೂ ಮರೆತು ಬಿಡಲಾಗುತ್ತದೆಯೆ? ಅವಳೆಂದಳು: "ಇಂದು ಗುಡಿಗೆ ಹೋಗಬೇಕಲ್ಲ?"

"ಹೌದು, ಆದರೆ, ನನಗೆ ಹೋಗಲಾಗುವುದಿಲ್ಲ. ನಾನತ್ತ ಹೋದರೆ, ಗದ್ದೆಯಿಡಿ ನಾಶವಾದರೆ........?"

"ಮತ್ತೆ ನಾನು ಹೋಗುವುದೆ? ಈ ಮಕ್ಕಳುಮರಿಗಳನ್ನು ಬಿಟ್ಟು........?"

"ಬೇರೇನೂ ಹೊಳೆಯುವುದಿಲ್ಲ. ಬಲಿ ನಡೆಯಲು ಸಮಯವಾದೊಡನೆಯೇ ಒಂದು ಗಳಿಗೆಯ ಮಟ್ಟಿಗೆ ಹೋಗಿ ಬಾ. ಮಕ್ಕಳನ್ನು ಮೊದಲೇ ಮಲಗಿಸಿಬಿಡು."

"ನಾನು ಹಿಂತಿರುಗಿ ಬರುವ ವೇಳೆಗೆ ಮಾರಿ ಮುನಿದು ಬಿಟ್ಟರೆ.... ಆಗ....?"

"ಅಯ್ಯೋ, ಪೆದ್ದಿ, ಮಾರಿಯ ಸೇವೆಗೆ ಹೋದಾಗ, ಮಾರಿ ಮುನಿಯುತ್ತಾಳೆಯೆ? ನನಗೂ ಹೋಗಬಹುದಿತ್ತು. ಆದರೆ, ನೋಡು, ಪೈರು ಪೂರ್ಣ ಹಣ್ಣಾಗಿದೆ. ಇನ್ನು ನಾಳೆನಾಡದು ಎಂಬಷ್ಟರಲ್ಲಿ ಕೊಯ್ದು ಹಾಕಬಹುದು. ಹಾಗಿರುವಾಗ, ಹಂದಿಯೋ ಕೋಣವೋ ಇಳಿದು ಬಂದರೆ, ವ್ಯರ್ಥ ನೋಡು........"

ಮಂಗಳ ತನ್ನ ಅಸಹಾಯಕತನವನ್ನು ವಿವರಿಸಿ ಮಾಲತಿಗೆ ತಿಳಿಯಲೆಳಸಿದ. ಆದರೆ, ಇದರಿಂದ ಮಾಲತಿಗೆ ಎಷ್ಟು ಸಾಂತ್ವನ ದೊರೆಯಿತೋ! ಪತಿಗೆ ಹೊರಡಲು ಅನುಮತಿಯಿತ್ತು, ತಾನು ಮಕ್ಕಳನ್ನು ಣಿಸಲು ತೊಡಗಿದಳು.

ರಾತ್ರೆ ಹತ್ತು, ಹನ್ನೊಂದು ಕಳೆದಿರಬಹುದು. ಮಾರಿಗುಡಿಯಲ್ಲಿ ಬೇಂಡು ವಾಲಗಗಳಿಂದ ಎದ್ದ ನಾದವು ಪ್ರತಿಧ್ವನಿಸಿ ಕಿವಿಯಲ್ಲಿ ಗುಯ್‌ಗುಡುತಿತ್ತು. ಸಾಮಾನ್ಯವಾಗಿ ಊರ ಹೆಚ್ಚಿನವರು ಅಲ್ಲಿ ಮನೆಗೊಬ್ಬರಂತೆ ಸೇರಿದ್ದಾರೆ. ಇನ್ನು ಕೆಲವೇ ಗಳಿಗೆಯಲ್ಲಿ ಮಾರಿಯ ಪ್ರೀತ್ಯರ್ಥವಾಗಿ ಬಲಿದಾನ ಪ್ರಾರಂಭವಾಗಲಿದೆ. ಮಾಲತಿಯೂ ತನ್ನ ಮುದ್ದು ಮಕ್ಕಳೆಲ್ಲರನ್ನೂ ಉಣಿಸಿ ಮಲಗಿಸಿದಳು. ಕಿರಿಯ ಮಗು ಲಚ್ಚ ಮಾತ್ರ ನಿದ್ದೆ ಮಾಡಲೇಕೋ ಹಿಂದುಳಿದಿದ್ದನು. ತೊಟ್ಟಿಲ

ಲ್ಲಿಟ್ಟು ತೂಗಿಯಾಯಿತು, ಕಾಲುಗಳಲ್ಲಿ ಮಲಗಿಸಿ ಬೆನ್ನು ತಟ್ಟಿಯಾಯಿತು, ಚಾಪೆಯಲ್ಲಿ ಮಲಗಿಸಿ ಮೊಲೆಹಾಲು ಕುಡಿಸಿಯಾಯಿತು. ಏನು ಮಾಡಿದರೂ ಮಗು ಮಾತ್ರ ಮಲಗುವುದನ್ನು ಬಿಟ್ಟು ಅಳಲು ಪ್ರಾರಂಭಿಸಿದೆ ಮಾಲತಿಯ ಗಟ್ಟಿ ಎದೆಗೂ ಅದನ್ನು ಸಹಿಸಿಕೊಳ್ಳುವುದು ಅಸಾಧ್ಯವಾಗಿತ್ತು. ತಡ ಮಾಡಿದರೆ, ಬಲಿಯ ಹೊತ್ತು ಕಳೆದು ಹೋಗುತಿತ್ತು. ಮಾರಿಯ ಅಪಕೃಪೆಗೆ ಪಾತ್ರಳಾಗಬೇಕಾದ ಸಂಭವವೂ ಬರಬಹುದಾಗಿತ್ತು. ಆದರೆ, ಮಗುವನ್ನು ಜತೆಯಲ್ಲಿ ಕರೆದೊಯ್ಯುವುದು ಆಕೆಗೆ ಸರಿಬರಲಿಲ್ಲ. ಬಿಟ್ಟುಹೋಗುವುದೂ ಅಸಾಧ್ಯವಾಗಿತ್ತು. ಆಗ ಮಾರಿಯ ಪ್ರತೀಕದೆದುರು ಬಲಿಯೊಡ್ಡಲ್ಪಡುವ ನೂರಾರು ಪ್ರಾಣಿಗಳ ನೆತ್ತರ ಓಕುಳಿ ಆ ಭಯಾನಕ ದೃಶ್ಯವನ್ನು ಕಂಡು ಮಗು ಹೆದರಿ ಹೋದರೆ........! ಅಲ್ಲದೆ ಹಾಲುಹಸುಳೆಯನ್ನತ್ತ ಒಯ್ಯುವುದು ಪ್ರಮಾದವಾಗಿ ಪರಿಣಮಿಸಿದರೆ...!! ತನ್ಮೂಲಕ ಬಯಸಿ ಬಸಿರಲ್ಲಿ ಪಡೆದ ಮಗುವನ್ನೂ ಕೈಬಿಡಬೇಕಾಗಿ ಬಂದರೆ..ಹೀಗೆ ನಾನಾ ಯೋಚನೆಗಳಿಂದ ಆಕೆ ಚಿಂತಾಕ್ರಾಂತಳಾದಳು. ಆಕೆಯ ಮನಸ್ಸು ಕವಲುದಾರಿಯ ಮೊದಲಲ್ಲಿ ನಿಂತಿತು.

ಹೀಗೆ ಆದೆಷ್ಟು ಸಮಯ ನಿಂತಿದ್ದಳೋ ಆಕೆಗೇ ತಿಳಿದಿರಲಾರದು. ಮಾರಿಗುಡಿಯಲ್ಲಿ ಸ್ಮಶಾನ ಮೌನ ಆವರಿಸಿತ್ತು. ತನ್ನ ಮನೆಯ ಪಕ್ಕದ ಗುಡ್ಡದ ತಪ್ಪಲಲ್ಲಿ ಕಾಲಸಪ್ಪಳ ಕೇಳತೊಡಗಿತು. ಕೆಲನಿಮಿಷಗಳಲ್ಲೇ ಅದು ಸ್ಪಷ್ಟವಾಗಿ ಪರಿಣಮಿಸಿತ್ತು. ಮಾಲತಿಯ ಹೃದಯ ಕಂಗಾಲಾಗತೊಡಗಿತು. ಅಷ್ಟರಲ್ಲಿ ಒಂದು ಕಾಡುಹಂದಿಯ ಕೂಗು! ಎಲ್ಲಿಯೋ ದೂರದಲ್ಲಿ ಹುಲಿಯ ಆರ್ಭಟ! ಕೆಲನಿಮಿಷಗಳಲ್ಲಿಯೇ ತಾನು ಉಳಿದುಕೊಂಡಿದ್ದ ಮನೆಯ ಭಾಗದಲ್ಲಿಯೇ ಜೋಡಿಸಲಾದ ಹಟ್ಟಿಯ ಬಾಗಿಲು ಬಡಿವ ಸದ್ದು! ಗೋಡೆಗಳನ್ನು ಪರಚುವ ಶಬ್ದ! ಮಣ್ಣು ಉದುರುವ ಮೆತ್ತಗಿನ ಧ್ವನಿ............! ಮಾಲತಿ ಸಂಪೂರ್ಣ ಧೈರ್ಯಗುಂದಿದಳು. ತಾನು ಅಥವಾ ತನ್ನ ಪತಿಯು ಮಾರಿಗುಡಿಗೆ ತೆರಳದೆ ಹೋದುದರಿಂದ ತಮ್ಮ ಮೇಲೆ

ಮಾರಿಯು ಮುನಿದಿರ ಬೇಕು. ತನ್ನ ಮೇಲೆ ಈಗ ಮಾರಿ ಯಾವ ರೂಪದಲ್ಲಿ ಬಂದು ಎರಗುವಳೋ? ಇಲ್ಲಿ ತನ್ನ ಮಕ್ಕಳನ್ನು ಎಂತು ಹಿಂಸಿಸುವಳೋ? ಅಲ್ಲಿ ಗದ್ದೆಯಲ್ಲಿ ಏಕಾಏಕಿಯಾದ ಪತಿಗೆ ಎಂತಹ ಪೀಡೆಯನ್ನು ಒದಗಿಸುವಳೊ ಎಂಬಿತ್ಯಾದಿಯಾಗಿ ಚಿಂತೆಯಿಂದ ಭಯದಿಂದ ಥರ ಥರನೆ ನಡುಗತೊಡಗಿದಳು. ಆದರೆ, ಆಕೆಯ ಆತ್ಮ ಹೇಳುತಿತ್ತು—ಪತಿಯು ಈ ಕರ್ತವ್ಯವನ್ನು ತನಗೊಪ್ಪಿಸಿ ಹೋಗಿದ್ದಾನೆ. ಆದುದರಿಂದ ನ್ಯಾಯ ಪಕ್ಷಪಾತಿಯಾದ "ಮಾರಿದೇವಿ" ಅವರನ್ನು ಯಾತನೆಗೀಡುಮಾಡದೆ ತನ್ನೆಡೆಗೇನೇ ಬಂದಿದೆ. ತಾನು ತನ್ನ ಕರ್ತವ್ಯ ಭಂಗವನ್ನು ಉದ್ದೇಶಪೂರ್ವಕವಾಗಿ ಮಾಡಿಲ್ಲ. ತನ್ನ ಮಗುವು ನಿದ್ರಿಸದಿರುವಾಗ ಮಾತೃ ಹೃದಯವು ಅದನ್ನು ಹಾಗೆಯೇ ಬಿಟ್ಟು ಹೇಗೆ ಹೊರಡಬಹುದು! ಆದುದರಿಂದ ದೈವದ ದೃಷ್ಟಿಯಿಂದಲೂ ತಾನು ಅಪರಾಧಿಯಲ್ಲ.

ಕೆಲವೊಮ್ಮೆ "ದೇವಿ" ಅನ್ಯಾಯ ಮಾರ್ಗವನ್ನು ಅವಲಂಬಿಸುವುದಿದೆ. ಅಲ್ಲದೇ ಊರವರೆಲ್ಲರೂ ಕಳೆದೆರಡು ವರ್ಷಗಳಲ್ಲಿ ತಾವೆಸಗಿದ ಅಪರಾಧವನ್ನು ತಿಳಿದು, ಅದನ್ನು ಪರಿಹರಿಸಿಕೊಳ್ಳಲು ಮುಂದಾಗಿರುವಾಗ, ತಾನು ಮಾತ್ರ ಆದರಿಂದ ಚ್ಯುತಳಾಗಿರುವುದು ನ್ಯಾಯವೇ ಎಂದು ಪ್ರಶ್ನಿಸುತ್ತದೆ ಆಕೆಯ ಮನಸ್ಸು. ಆದರೆ, ಇದಕ್ಕೆ ಯಾವ ಹೊಸ ಉತ್ತರವೂ ಆಕೆಯಲ್ಲಿರಲಿಲ್ಲ.

ಸದ್ಯ ದೇವಿಯ ಅಪಕೃಪೆಗೆ ಗುರಿಯಾಗಲೇ ಬೇಕಾಗಿತ್ತು. ತನ್ನ ಮತ್ತು ತನ್ನ ಮಕ್ಕಳ ಹಾಗೂ ದನಕರುಗಳ ರಕ್ಷಣೆಯನ್ನೂ ಮಾಡಬೇಕಿತ್ತು. ದೇವಿಯನ್ನು ಮನಸ್ಸಿನಲ್ಲಿ ಪರಿಪರಿಯಾಗಿ ಸ್ತುತಿಸುತ್ತ ತಾನು ನಿರಪರಾಧಿಯೆಂದೂ ತನಗೆ ಕೀಟಲೆ ಕೊಡದೆ ದೂರ ಹೋಗಬೇಕೆಂದೂ ಪ್ರಾರ್ಥಿಸಿದಳು. ಆದರೆ, ದೇವಿ ಈ ಮೊರೆಯನ್ನು ಕೇಳಿದಂತೆ ಕಂಡುಬರಲಿಲ್ಲ. ಗೋಡೆಯಿಂದ ಒಂದೇ ಸವನೆ ಮಣ್ಣು ಉದುರುತಿತ್ತು. ಕಾಡು ಹಂದಿ ತನ್ನ ಕೊಂಬುಗಳಿಂದ ಗೋಡೆಯಲ್ಲಿ ತೂತು ಕೊರೆಯುತ್ತಿದೆಯೆಂದು ಆಕೆ ತಿಳಿದುಕೊಂಡಳು. ಅಷ್ಟರಲ್ಲಿಯೇ ಗೋಡೆಯ ನಡುವೆ ಒಂದು ತೂತು ಕಾಣಿಸಿತು. ಚಿಮಣಿ ದೀಪದ

ಅಲ್ಪ ಬೆಳಕಿನಲ್ಲಿಯೇ ಇದು ದೃಷ್ಟಿ ಗೋಚರವಾಯಿತು. ಬರಬರುತ್ತ ತೂತು ದೊಡ್ಡದಾಗುತ್ತ ಬಂತು. ತಾನು ಈ ರೀತಿ ದೈನ್ಯಳಾಗಿ ಬೇಡಿಕೊಳ್ಳುತಿದ್ದರೂ ತನ್ನಲ್ಲಿ ಲವಲೇಶಾಪರಾಧವಿಲ್ಲದೆ ಹೋದರೂ ದೇವಿಯು ತನ್ನನ್ನು ಶಿಕ್ಷಿಸುವುದೆಂದರೆ, ಆಕೆ ದೇವಿಯೇ ಅಲ್ಲ; ಅದು ಯಾವುದೋ ಪಿಶಾಚಿಯಿರಬೇಕೆಂದು ನಿಶ್ಚಯಿಸಿ, ಎಲ್ಲಿಲ್ಲದ ಧೈರ್ಯ ತಂದುಕೊಂಡಳು ಮಾಲತಿ. ಆಕೆಯ ಅಂಗಾಂಗಗಳಲ್ಲಿ ವಿದ್ಯುತ್ ಸಂಚಾರವಾದಂತೆ ಭಾಸವಾಯಿತು. ಅಷ್ಟರಲ್ಲಿಯೆ ಆ ಗೋಡೆಯ ತೂತಿನೊಳಗಣಿಂದ ಒಂದು ಕಾಲಿನಂತಿರುವ ವಸ್ತು ಒಳ ಬರತೊಡಗಿತು. ಮಾಲತಿ ಸಮೀಪದಲ್ಲಿದ್ದ, ತನ್ನ ಪತಿ ಕೊಟ್ಟು ಹೋಗಿದ್ದ ಬಲವಾದ ಉದ್ದನೆಯ ದೊಣ್ಣೆಯೊಂದನ್ನು ಹಿಡಿದು ಗೋಡೆಯ ಪಕ್ಕಕ್ಕೆ ತೆರಳಿ, ದೇವಿಯನ್ನು ನೆನೆದು ಅದಕ್ಕೆ ಒಂದು ಬಲವಾದ ಏಟು ಕೊಟ್ಟಳು. ಏಟು ಬಿದ್ದುದೇ ತಡ, "ಅಯ್ಯಯ್ಯೋ" ಎಂಬ ಚೀರಾಟದೊಡನೆ ಆ ಕಾಲು ತೀವ್ರವಾಗಿ ಹೊರಗೆ ಹೋಯಿತು. ಮನೆಯ ಹೊರ ಮಗ್ಗಲಲ್ಲಿ ಅನೇಕ ಕಾಲ ಸಪ್ಪಳಗಳು ಓಡುತ್ತಿರುವುದರ ಕಲ್ಪನೆಯನ್ನು ಕೊಡತೊಡಗಿದುವು. ಮಾಲತಿಯು ಮಾನವ ಸ್ವರವನ್ನು ಕೇಳಿ, ಆಶ್ಚರ್ಯ ಹಾಗೂ ಅಂಜಿಕೆಗಳೊಡನೆ "ಕಳ್ಳ....ಕಳ್ಳ...." ಎಂದು ಗಟ್ಟಿಯಾಗಿ ಚೀರತೊಡಗಿದಳು. ಅನತಿ ದೂರದಲ್ಲೇ ಬಲಿ ತೆತ್ತು ತಂತಮ್ಮ ಮನೆಗಳಿಗೆ ತೆರಳುತಿದ್ದ ಜನರು ಈ ಕೂಗಾಟವನ್ನು ಕೇಳಿ ಧಾವಿಸಿ ಬಂದರು. ಮಾಲತಿ ಬಾಗಿಲು ತೆರೆದು ಚುಟುಕಿನಲ್ಲಿ ನಡೆದ ಘಟನೆಯನ್ನು ವಿವರಿಸಿದಳು.

ಅಷ್ಟರಲ್ಲಿಯೇ ಗುಡಿಯಲ್ಲಿ ಸೇರಿದವರೆಲ್ಲರೂ ಮಂಗಳನ ಮನೆಯಲ್ಲಿ ಕೂಡಿದರು. ಕೆಲವು ಧೈರ್ಯಶಾಲಿಗಳು ಪಂಜಿಗಳನ್ನು ಉರಿಸಿ ಕಳ್ಳರ ಶೋಧನೆಗೆ ಹೊರಟರು. ಸುಮಾರು ಮೂರು ಫರ್ಲಂಗ್ ದೂರದ ತೋಡಬದಿಯಲ್ಲೊಬ್ಬ ಕಾಲು ಕುಂಟಿಸುತ್ತ, ಕೈಯಲ್ಲಿ ಕೋಳಿಯೊಂದನ್ನು ಹಿಡಿದುಕೊಂಡು ಹೋಗುತ್ತಿರುವುದು ಕಂಡು ಬಂತು. ಅವನನ್ನು ಹಿಡಿದು, ಪರೀಕ್ಷಿಸಿದಾಗ, ಆಗ ತಾನೇ ಪೆಟ್ಟು ತಾಗಿದವನೆಂದು ಸಿದ್ಧವಾಗಿ, ಆತನನ್ನು ಮಂಗಳನ ಮನೆಗೆ ಎಳೆದು

ತರಲಾಯಿತು. ಅಲ್ಲಿಯೇ ನಡೆದ ವಿಚಾರಣೆಯಿಂದ, ಆ ಗ್ರಾಮದಲ್ಲಿ ಅದುವರೆಗೆ ನಡೆದ ಕಳವುಗಳಿಗೆ ತಾನೂ ತನ್ನ ಅನುಯಾಯಿಗಳೂ ಕಾರಣರೆಂದು ಬಾಯಿಬಿಟ್ಟನವ. ಇಷ್ಟು ಹೊತ್ತಿಗೆ ನಸುಕು ಹರಿದಿತ್ತು. ಮಂಗಳನೂ ಮನೆಗೆ ಹಿಂತಿರುಗಿದನು. ತನ್ನ ಹೆಂಡತಿಯ ಎದೆಗಾರಿಕೆಯ ಪ್ರಶಂಸೆಯನ್ನು ಊರವರ ಮುಖದಿಂದ ಕೇಳಿ ಉಬ್ಬಿದನು. ಸೂರ್ಯೋದಯವಾದೊಡನೆಯೇ ಪೋಲೀಸು ಕಛೇರಿಗೆ ದೂರು ಹೋಯಿತು. ಮುಂದಕ್ಕೆ ನಡೆದ ವಿಚಾರಣೆಯಲ್ಲಿ ಕಳ್ಳತನದ ಆರೋಪವು ಸಿದ್ಧವಾಗದೆ ಹೋಯಿತು. ಆರೋಪಿಗಳ ಬಿಡುಗಡೆಯೂ ಆಯಿತು. ಆದರೆ, ಒಂದು ಮಾತು ಮಾತ್ರ ಸತ್ಯ-ಆ ಮಾರಿಗೆ ಬಲಿತೆತ್ತ ದಿನದಿಂದ ಆ ಗ್ರಾಮದಲ್ಲಿ ತಿರುಗಿ ಕಳ್ಳತನವಾದುದರ ಬಗ್ಗೆ ವರದಿಗಳು ಮಾತ್ರ ಬರಲಿಲ್ಲ. ಇದಕ್ಕೆ ಮಾರಿಯ ಕೃಪಾ ಕಟಾಕ್ಷವೇ ಕಾರಣವಾಗಿರಬಹುದು; ಅಥವಾ ಮಾಲತಿಯ ಎದೆಗಾರಿಕೆಯೂ ಕಳ್ಳರಿಗೆ ಬುದ್ಧಿ ಕಲಿಸಿರಬಹುದು!

## ೫ ಆವಶ್ಯಕತೆ ಉಳಿಯಲಿಲ್ಲ

ರಾಮಕೃಷ್ಣ ಹಸೆಯಲ್ಲಿ ಕುಳಿತಿದ್ದನೇನೋ ಹೌದು; ಆತನ ಚಿಕ್ಕಪ್ಪನ ಹೆಣ್ಣು ಮಕ್ಕಳು ಆರತಿಯೆತ್ತಿದರು. ಅದರ ಪ್ರತಿಫಲವೆಂದು ಹರಿವಾಣಕ್ಕೆ ಮುಕ್ತ ಹಸ್ತದಿಂದ ಹಣವನ್ನು ಯಾಂತ್ರಿಕನಾಗಿಯೇ ಸುರಿದಿದ್ದ. ಆತನನ್ನೇ ನೋರೆ ನೋಟದಿಂದ ನೋಡುತಿದ್ದ ನವ ವಧುವಿಗೆ ಇಂತಹ ಯಾಂತ್ರಿಕತೆಯು ಅರಿವು ಆಗದಿರಲಿಲ್ಲ. ಆಕೆ ನೋಡುತಿದ್ದಂತೆಯೇ ತನ್ನ ಕೈ ಹಿಡಿದ ಪತಿಯ ನಯನಗಳಿಂದ ಎರಡು ಹನಿ ನೀರು ರೆಪ್ಪೆಗಳೆಡೆಯಿಂದ ಜಾರಿ, ಉಟ್ಟದ್ದ ಜರಿಯ ಧೋತಿಗೆ ಬಿದ್ದು ಆರಿ ಹೋದುವು. ಸಂಭ್ರಮ ಸಡಗರಗಳಿಗೆ ಹೆಸರಾಗಿದ್ದ ಆ ಚಪ್ಪರದಲ್ಲಿ ಅದನ್ನುಗಮನಿಸಿದವರು ಮಾತ್ರ ಯಾರೊಬ್ಬರೂ ಇರಲಿಲ್ಲ. ಎಲ್ಲರೂ ಅವರವರ ಕಾರ್ಯಗಳಲ್ಲಿ ತತ್ಪರರಾಗಿದ್ದರು.ಹಸೆ ಮಣೆಯಿಂದ ಎದ್ದ ರಾಮು ಉಪಚಾರವನ್ನೆಲ್ಲ ಯಾಂತ್ರಿಕವಾಗಿಯೇ ಪೂರೈಸಿ ನೆಟ್ಟಗೆ ತನ್ನ ಕೋಣೆಯೊಳಕ್ಕೆ ನಡೆದ. ಅಲ್ಲಿ ಮಂಚದ ಮೇಲೆ ಕುಕ್ಕರಿಸಿದ. ನಿಮಿಷಗಳುರುಳಿದಂತೆ ಆತನ ಮುಖವೂ ವಿವರ್ಣವಾಗತೊಡಗಿತು, ಕಣ್ಣುಗಳಲ್ಲಿ ನೀರು ತುಂಬಿತು. ತಲೆದಿಂಬನ್ನೆಲ್ಲ ಒದ್ದೆಮಾಡತೊಡಗಿದ. ಸಂಭ್ರಮದಿಂದಿರಬೇಕಾದ ಗಳಿಗೆಯಲ್ಲಿಯೂ ಆತನನ್ನು ಅದಾವುದೋ ಒಂದು ಮನೋಗ್ಲಾನಿ ಕವಿದಿತ್ತು; ಅದು ಅವನ ಹೃದಯವನ್ನು ಸೀಳಿತ್ತು; ಅವನ ಮನಸ್ಸು ಆಗಿ ಹೋದ ಒಂದು ಘಟನೆಯನ್ನು ನೆನಪಿಸಿ ಅಳುತ್ತಲಿತ್ತು. ಅದು ಆಗದೆ ಇರುತಿದ್ದರೆ, ತನ್ನಕ್ಕನೇ ತನಗೆ ಆರತಿ ಬೆಳಗುತ್ತಿರಲಿಲ್ಲವೆ?

ಐದು ವರುಷಗಳ ಹಿಂದಿನ ಮಾತು. ಊರಿನಲ್ಲಿ ವಿದ್ಯಾಭ್ಯಾಸವನ್ನು ಮುಗಿಸಿದ ರಾಮು ಅನ್ನದೇವರನ್ನೊಲಿಸುವ ದಾರಿಯನ್ನು ಕಾಣಬೇಕಿತ್ತು. ಹೇಳಿ ಕೇಳಿ ನಿರುದ್ಯೋಗಿಗಳ ತವರಾದ ಆ ಸುಡುಗಾಡಿನಲ್ಲಿ

ಉದ್ಯೋಗಾವಕಾಶವಾದರೂ ಎಲ್ಲಿಂದ ಬರಬೇಕು? ಅದಕ್ಕಾಗಿಯೇ ಬೊಂಬಾಯಿಯಲ್ಲಿದ್ದ ತನ್ನ ಗೆಳೆಯನೊಬ್ಬನೊಡನೆ ಪತ್ರ ವ್ಯವಹಾರ ವನ್ನೂ ಇಟ್ಟುಕೊಂಡಿದ್ದ. ಆತನೇನೋ ಅಲ್ಲಿ ಒಳ್ಳೆಯ ಉದ್ಯೋಗ ವನ್ನು ಅವಲಂಬಿಸಿ, ಮರ್ಯಾದೆಯಿಂದ ಬದುಕಲು ಶಕ್ತನಾಗಿದ್ದ. ಒಂದು ದಿನ ಆತನಿಂದ ಪತ್ರವೂ ಬಂತು. "ಸುಮ್ಮನೆ ಊರಲ್ಲಿ ಕುಳಿತು ನೊಣ ಓಡಿಸುವುದೇಕೆ? ಕೂಡಲೇ ಇಲ್ಲಿ ಬಾ. ಏನಾದರೂ ಪ್ರಯತ್ನ ಮಾಡಿದರೆ ಕೆಲಸ ಸಿಕ್ಕೀತು. ಕೇವಲ ಅಪ್ಲಿಕೇಶನ್‌ಗಳಿಂದ ಕೆಲಸ ಕೈಗೂ ಡುವ ಕಾಲವಿದಲ್ಲ. ಅದರೊಂದಿಗೆ ಕಾಂಡಿಡೇಟೂ ಹಾಜರಿರಬೇಕಾ ಗುತ್ತದೆ. ಆದುದರಿಂದ ತಡಮಾಡಬಾರದು" ಎಂದು.

ಮಿತ್ರನ ಪತ್ರ ಕೈಸೇರಿದಂದು ರಾಮುವಿಗೆ ಸ್ವರ್ಗವು ಮೂರೇ ಗೇಣು ಉಳಿದಂತಾಯಿತು. ಆದರೆ, ಬೊಂಬಾಯಿಗೆ ಹೋಗಬೇಕಾದರೆ, ಹಣ ಬೇಕು ತಾನೆ? ತಂದೆಯವರನ್ನು ಇದಕ್ಕಾಗಿ ಕಾಡಿದರೆ ಕಾಸೂ ಹುಟ್ಟಲಾರದು, ಎಲ್ಲಿ ಬೊಂಬಾಯಿ? ಎಲ್ಲಿ ನಮ್ಮೂರು? ಯಾರವನೋ ಗೆಳೆಯ? ಅಲ್ಲಿ ಹೋಗಿ ಫುಟ್‌ಪಾಥಿನಲ್ಲಿ ಬಿದ್ದು ಸಾಯುವುದಕ್ಕಿಂತ ಇಲ್ಲೇ ಮನೆಯಲ್ಲಿ ಉಪವಾಸ ಬಿದ್ದಾದರೂ ಸಾಯಬಹುದು ಎಂಬ ವಾದದ ಪುರಸ್ಕರ್ತರ ಮುಂದೆ ಆತ ಏನೆಂದು ಬಾಯಿ ಬಿಚ್ಚಬೇಕು? ಅಲ್ಲದೆ ಹಣವೆಂದರೆ ಸುಮ್ಮನಾಗುತ್ತದೆಯೆ? ಐವತ್ತು ರೂಪಾಯಿಗಳ ನ್ನಾದರೂ ಅವರು ತರಬೇಕು. ಎಲ್ಲಿಂದ? ಕೊನೆಗೆ ನೂರು ಯೋಚನೆ ಮಾಡಿ, ತನ್ನ ಭಾವನಿಂದ ರೂಪಾಯಿ ಎರವಲು ಪಡೆದು ಮನೆಯಲ್ಲಿ ಅಕ್ಕನ ಮನೆಗೆಂದು ಹೇಳಿ ಬೊಂಬಾಯಿಯ ದಾರಿ ಮೆಟ್ಟಿಯೇ ಬಿಟ್ಟ. ಅಲ್ಲಿ ಹೋದ ನಂತರ ಸತ್ಯ ಸಂಗತಿಯನ್ನು ತಿಳಿಸಿ ಮನೆಗೆ ಕಾಗದವನ್ನೂ ಹಾಕಿದ.

ಗೆಳೆಯ ಮೋಹನನ ಉದಾರತೆಯಿಂದ ರಾಮುವಿನ ದಿನಗಳು ಸುಲಭವಾಗಿ ಉರುಳುತಿದ್ದುವು. ಪ್ರತಿನಿತ್ಯವೂ ವರ್ತಮಾನ ಪತ್ರಿಕೆ ವೀಕ್ಷಿಸುವುದು, 'ವಾಂಟೆಡ್ ಕಲಂ'ನಲ್ಲಿ ತನ್ನ ಯೋಗ್ಯತೆಗೆ ತಕ್ಕ ಉದ್ಯೋಗಾವಕಾಶಕ್ಕೆ ಅರ್ಜಿ ಬರೆಯುವುದು; ಸಾಧ್ಯವಾದರೆ, ಅದನ್ನು ಕೈಯಾರೆ ಮುಟ್ಟಿಸುವುದು, ಅವರಿಂದ 'Let me see' ಎನ್ನಿಸಿ

ಕೊಳ್ಳುವುದು, ಕೋಣೆಗೆ ಮರಳುವುದು - ಇದೇ ಆತನ ದಿನಚರ್ಯೆ ಯಾಗಿತ್ತು. ಇನ್ನೂ ಅವಿವಾಹಿತನಾಗಿದ್ದ ಮಿತ್ರನ ಮನಸ್ಸಿನಂತೆಯೇ ಆತನ ವೇತನವೂ ಇದ್ದುದರಿಂದ ಬಹಿರಂಗವಾಗಿ ರಾಮುವಿಗೆ ಯಾವ ಅನನುಕೂಲವಾಗಲಿಲ್ಲ

ಆದರೆ, ರಾಮುವಿನ ಮನಸ್ಸು ಒಳಗಿಂದೊಳಗೆ ಹೊಯ್ದಾಡು ತಿತ್ತು. ಬೂದಿಯೊಳಗೆ ಹೊಗೆಯುತ್ತಿರುವ ಬೆಂಕಿಯಂತೆ ಅದು ಆಂ ತರಿಕವಾಗಿ ನೋಯುತಿತ್ತು. ಕೆಲಸದ ಆಸೆಯಿಂದ ಬೊಂಬಾಯಿ ಸೇರಿ ತಿಂಗಳುಗಳು ಆರು ಸಂದಿದ್ದುವು. ಆದರೂ ಮನದಾಶಯು ವಿನ್ನೂ ಕನಸಿನ ಮಂಡಿಗೆಯಾಗಿ ಉಳಿದಿತ್ತು. ಈ ವ್ಯಸನದಿಂದ ಅವನು ಸೊರಗಿ ಕಡ್ಡಿಯಾಗಿ ಹೋದ. ಈ ಸಂಗತಿ ಮಿತ್ರ ಮೋಹ ನನಿಗೂ ತಿಳಿಯದಿರಲಿಲ್ಲ. ಆದರೆ ಆತನಾದರೂ ಏನು ಮಾಡಬಹು ದಾಗಿತ್ತು? ಅವನೂ ಹೇಳಿ ಕೇಳಿ ಕಂಪೆನಿಯೊಂದರ ನೌಕರ ತಾನೆ?

ಇನ್ನೂ ಕೆಲವು ಬಾರಿ ಸೂರ್ಯ ಉದಿಸಿದ; ಅಸ್ತಂಗತನಾದ. ಒಂದುದಿನ ಮುಂಜಾನೆ ಎದ್ದ ರಾಮು ವರ್ತಮಾನ ಪತ್ರಿಕೆಯನ್ನೇ ತಿರುವಿ ಹಾಕುತಿದ್ದ. ಗೆಳೆಯ ಮೋಹನನೂ ಪ್ರಾತರ್ವಿಧಿಯನ್ನು ಮುಗಿಸಿ ಅತ್ತ ಬಂದ ಅದೇನು ಆತನಿಗೆ ಕಂಡಿತೊ, ವಿನೋದಕ್ಕೆಂದು, ‹ಇನ್ನೂ ಅದೆಷ್ಟು ದಿನ ಪೇಪರ್ ನೋಡಬೇಕಾಗುತ್ತದೊ?" ಎಂದ. ರಾಮುವು ದಿಗ್ಗನೆದ್ದು ನಿಂತ; ಅವನ ನೇತ್ರಗಳು ಸಜಲವಾದುವು "ಮೋಹನ, ನನ ಗಂತೂ ಉದ್ಯೋಗ ಗಳಿಸುವ ಆಶೆಯಿಲ್ಲ. ಇಷ್ಟು ದಿನ ಇಲ್ಲಿದ್ದು ನಿನಗೆ ಕಷ್ಟ ಕೊಟ್ಟದ್ದೇ ಸಾಕೆನಿಸುತ್ತದೆ. ನೆಟ್ಟಗೆ ಮನೆಗೆ ನಡೆಯುವ ಎಂದೆ ನಿಸುತ್ತದೆ."

"ಹೆಚ್ಚು ಚಿಂತಿಸಬೇಡ ರಾಮು. ತಾಳುವಿಕೆಗಿಂತನ್ಯ ತಪವು ಬೇರಿಲ್ಲ ಎನ್ನುತ್ತಾರಲ್ಲಾ? ಇನ್ನೂ ಕೆಲದಿನವಿರು. ಎಲ್ಲಿಯಾದರೂ ಏನಾದರೂ ಆದೀತು. ನಾವು ಕೇಳಿದೊಡನೆಯೇ ಕೆಲಸ ಕೊಡಲು ಕಂಪೆನಿಯೇನು ನಮ್ಮ ಮಾವನ ಮನೆಯೆ?" ಎಂದು ಮಾತು ಮುಗಿ ಸುವುದರಲ್ಲಿದ್ದ. ಹೊರಗಣಿಂದ ಅಂಚೆಯವನು ‹ಪೋಸ್ಟ್' ಎಂದು

ಕೂಗಿ ಬಾಗಿಲು ತಟ್ಟಿದ. ಹೊರ ಹೋಗಿ ಅದನ್ನು ತಂದ ಮೋಹನ "ರಾಮೂ ನೋಡು, ನಿನಗೊಂದು ಕವರಿದೆ, ಎಂದು ಆತನ ಕೈಗಿತ್ತ.

ಮನೆಯಿಂದಲೂ ಕಾಗದ ಬಾರದೆ ಹತ್ತಾರು ದಿನಗಳು ಸಂದಿದ್ದುವು. ಅವರಿಗೂ ತನ್ನ ಮೇಲೆ ಕೋಪ ಬಂದಿರಬೇಕು; ತಮ್ಮ ಕಣ್ಣೆದುರು ದುಡಿದು ಸಂಪಾದಿಸಬೇಕಾದ ಮಗ, ತಮ್ಮ ಮುಂದೆಯೂ ಇಲ್ಲ; ದುಡಿಮೆಯೂ ಇಲ್ಲವೆಂಬಾಗ ಯಾವ ತಾಯ್ತಂದೆಯರಿಗೆ ಸಿಟ್ಟು ಬಾರದು? ಪ್ರಾಯಃ ತತ್‌ಕ್ಷಣ ಹೊರಟು ಬಾ ಎಂದು ಬರೆದಿರಬೇಕೆಂದು ಉದಾಸೀನನಾಗಿಯೇ ಕವರನ್ನೊಡೆದ. ಆದರೆ, ಪತ್ರದ ವಿಷಯವನ್ನು ಓದುತ್ತ ಹೋದಂತೆ ಆತ ತನ್ನ ಕಣ್ಣುಗಳನ್ನೇ ನಂಬದಾದ; 'ಪ್ರಕಾಶ ಎಂಡ್ ಕಂಪೆನಿ'ಯಲ್ಲಿ ಕೆಲಸಕ್ಕೆ ಹಾಜರಾಗಬೇಕೆಂದು ಆರ್ಡರ್ ಆದಾಗಿತ್ತು! ರಾಮುವಿನ ನಯನಗಳು ಕೃತಜ್ಞತೆಯಿಂದ ತುಂಬಿ ಬಂದುವು. ಮೋಹನನ ಅನ್ನವನ್ನುಂಡುದರ ಪರಿಣಾಮವಾಗಿ ಆರೂವರೆ ತಿಂಗಳುಗಳ ನಂತರ ರಾಮುವಿಗೆ ಉದ್ಯೋಗ ಲಭಿಸಿತ್ತು.

ಅವನು ಮೋಹನನ ಬಳಿಗೆ ಹೋಗಿ ಪತ್ರವನ್ನಿತ್ತ. ಓದಿದ ಆತನಿಗೂ ಸಂತೋಷವಾಯಿತು. 'ಓ, ನಾಳೆಯೇ ಕೆಲಸಕ್ಕೆ ಸೇರಿಕೊಳ್ಳಬೇಕಾಗಿದೆ. ಆದುದರಿಂದ ತಕ್ಕ ಏರ್ಪಾಡು ಮಾಡಬೇಕೆ'ಂದು ಆತ ರಾಮುನಿಗೆ ಹಲವಾರು ಸಲಹೆಗಳನ್ನಿತ್ತ. ಆತನಿಗೂ ಆಫೀಸಿಗೆ ಹೊರಡಲು ವೇಳೆಯಿದ್ದುದರಿಂದ ಉಡುಪು-ತೊಡುಪುಗಳು, ದಾಕ್ಷಿಣ್ಯ-ಸಲಿಗೆಗಳು ಶಿಷ್ಟಾಚಾರಗಳ ವ್ಯವಹಾರ ಮೊದಲಾದುವುಗಳ ಬಗ್ಗೆ ಅವನು ಉಪದೇಶವಿತ್ತ. ಕೆಲಸ ದೊರೆಯುವುದೇ ಕಷ್ಟ; ದೊರೆತುದನ್ನು ಉಳಿಸಿಕೊಳ್ಳುವುದು ಮತ್ತೂ ಪ್ರಯಾಸ ಎಂದು ಮುಂತಾಗಿ ಅಪ್ಪಟ ದೇಶಭಕ್ತರು ಸ್ವಾತಂತ್ರ್ಯ ರಕ್ಷಣೆ ಮುಳ್ಳಿನ ಹಾಸಿಗೆಯೆಂದಂತೆ ಲಗುಬಗೆಯಿಂದ ತಿಳಿಸಿದ. ನೌಕರಿ ಸೇರುವ ಹೊಸ ಹುರುಪಿನಲ್ಲಿ ರಾಮು ಎಂದುದಕ್ಕೆಲ್ಲಾ ಸೈಗುಟ್ಟಿ ನಾಳಿನ ತಯಾರಿಯಲ್ಲಿಯೇ ನಿಮಗ್ನನಾದ.

ಸಂಜೆಯ ಹೊತ್ತು. ದಿನದ ೨೪ ತಾಸುಗಳೂ ಕೆಲಸ ಮಾಡುತ್ತಿರುವ ಬೊಂಬಾಯಿ ನಗರ ಈ ಸಮಯದಲ್ಲಿ ಮತ್ತಷ್ಟು ಗದ್ದಲದಿಂದ ಕೂಡಿರುತ್ತದೆ. ತಾನು ಕೆಲಸಕ್ಕೆ ಹಾಜರಾಗಬೇಕಾದ ಕಂಪೆನಿಯ

ಕಾರ್ಯಾಲಯವನ್ನು ರಾಮು ನೋಡಿ ಬಂದ. ಇನ್ನೇನು, ರಾತ್ರಿಬೆಳಗಾಗುವುದೇ ತಡ, ಆತನ ಹಣೆಗಂಟಿದ್ದ 'ನಿರುದ್ಯೋಗಿ' ಎಂಬ ನಾಲ್ಕಕ್ಷರದ ಪದವಿಯು ಮೂರಕ್ಷರಗಳಲ್ಲಿ ಪರ್ಯವಸಾನಗೊಳ್ಳುವ ಸುಮುಹೂರ್ತ ಸಮೀಪಗತವಾಗುತ್ತಿದೆ ಎಂದಿಲ್ಲದ ಹುಮ್ಮನಸ್ಸಿನಿಂದ ರಾಮು ಅಂದು ಆನಂದಲೋಲನಾಗಿದ್ದ. ತನ್ನ ಸ್ನೇಹಿತನೊಬ್ಬನ ಕರುಣೆಯಿಂದ ಇಷ್ಟು ದಿನ ಕಾದುದರ ಪರಿಣಾಮವಾಗಿ ಬೊಂಬಾಯಿಯ ಮಹಾ ನಗರದಲ್ಲಿ ಉದ್ಯೋಗ ಲಭಿಸುವ ಸದವಕಾಶ ಪ್ರಾಪ್ತವಾಗಿರುವಾಗ ಯಾರಿಗೆ ತಾನೇ ಸಂತೋಷವಾಗದುಳಿಯದು?

090480

ರಾತ್ರಿಯೆಲ್ಲ ಜಾಗರಣೆ ಮಾಡಿ ಬೆಳಗಾಗುವುದನ್ನೇ ನಿರೀಕ್ಷಿಸುತ್ತಿದ್ದ ರಾಮುವಿಗೆ ಟ್ರಾಮುಗಳ, ರೈಲುಬಂಡಿಗಳ, ಬಸ್ಸುಗಳ ತೀವ್ರನಾದ ಓಡಾಟದ ಗದ್ದಲವು ಬೆಳಗಾಗುತ್ತಿರುವುದನ್ನು ಸೂಚಿಸಿತು. ಲಗುಬಗೆಯಿಂದ ರಾಮುವೆದ್ದು ಪ್ರಾತರ್ವಿಧಿಗಳನ್ನು ಪೂರೈಸಿ ಪಾದಗಳಿಗೆ ಬೂಟು ಸಿಕ್ಕಿಸುವನಿದ್ದ, ಹೊರಗಡೆ ಬಾಗಿಲಲ್ಲಿ ಕಟಕಟ ಶಬ್ದ ಕೇಳಿ ಬಂತು. ಈ ಬೆಳಗ್ಗಿನ ಜಾವದಲ್ಲಿ ಬಾಗಿಲು ಬಡೆಯುವವನು, ಯಾವನಪ್ಪ ಎಂದು ಅರ್ಧ ತುರುಕಿಸಿದ ಬೂಟನ್ನು ಅಲ್ಲಿಯೇ ಕೊಡಹಿ ಬಾಗಿಲ ಬಳಿ ನಡೆದ. ಟೆಲಿಗ್ರಾಮ್ ಮೆಸೆಂಜರನು ಆತನನ್ನು ಸ್ವಾಗತಿಸಿದ, ರಾಮಕೃಷ್ಣರಾವ್ ಎಂದರೆ ಯಾರು ಎಂದು ವಿಚಾರಿಸಿ, ಆತನೇ ಎಂಬುದನ್ನು ಖಚಿತಮಾಡಿಕೊಂಡು ಒಂದು ಟೆಲಿಗ್ರಾಂ ಕವರನ್ನನ್ನಿತ್ತು ಸಹಿ ತೆಗೆದುಕೊಂಡು ಸರಿದು ಹೋದನವ. ಟೆಲಿಗ್ರಾಂ ಬಿಚ್ಚಿ ಓದಿದ ರಾಮು ಅಲ್ಲೇ ಕುಕ್ಕರಿಸಿ ಬಿದ್ದುಬಿಟ್ಟ.

ಮೋಹನನೂ ಗಾಬರಿಯಿಂದ ಹೊರ ಬಂದ. ಗೆಳೆಯನ ಅಸಹಾಯಕ ಪರಿಸ್ಥಿತಿಯನ್ನು ಕಂಡ ಅವನು 'ಏನು ಏನಾಯಿತು?' ಎಂದು ನಿಕಟ ಸರಿದ. ಉತ್ತರ ರೂಪವಾಗಿ ರಾಮುವೇನನ್ನೂ ಉಸಿರದೆ ಸುರಿಯುತಿದ್ದ ಕಣ್ಣೀರನ್ನು ಒರಸಿ ಬಿಕ್ಕಳಿಸುತ್ತ ಕೈಯ್ಯತಾರನ್ನು ಮುಂದೆ ಚಾಚಿದನು.

"Madhava Serious Start Immediatly" (ಮಾಧ

ವನಿಗೆ ತೀವ್ರ ಖಾಯಿಲೆ ಕೂಡಲೆ ಹೊರಡು) ಮಾಧವನೆಂದರೆ, ರಾಮು ವಿನ ಭಾವ; ಅಕ್ಕನ ಗಂಡ. ಆತನಿಗೆ ಊರಿಂದ ಬೊಂಬಾಯಿಗೆ ಬರಲು ಧನರೂಪದ ಸಹಾಯವಿತ್ತವರು; ಅಲ್ಲದೇ ಆ ಮೇಲಾದರೂ ಪ್ರತಿ ತಿಂಗಳೂ ಒಂದಲ್ಪ ಹಣವನ್ನು ಕಳುಹಿಸುತಿದ್ದವರು. ಇಂದು ಆತನಿಗೆ ಉದ್ಯೋಗ ಲಭಿಸುತ್ತಿರುವುದು ನಿಜವೇ ಎಂದಾದರೆ, ಅದು ಅವರ ಅನು ಗ್ರಹದಿಂದ. ಅಂತಹ ಭಾವನವರು ಸಕತ್ ಖಾಯಿಲೆಯಲ್ಲಿ ಬಿದ್ದಿರು ವಾಗ ಕೂಡಲೇ ಹೊರಟು ಹೋಗುವುದು ನ್ಯಾಯ. ಆದರೆ....ಆದರೆ ಬಹು ದಿನಗಳ ಪೇಚಾಟದ ನಂತರ ಲಭಿಸುತ್ತಿರುವ ಉದ್ಯೋಗವನ್ನು ಕೈ ಬಿಟ್ಟು ತೆರಳುವುದೆಂದರೆ.... ಭವಿಷ್ಯವನ್ನೇ ಹಾಳು ಮಾಡಿಕೊಂಡಂತೆ.

ರಾಮು ತಡವರಿಸುತ್ತ ಕೇಳಿದ: "ಈಗ ಏನು ಮಾಡಲಿ?" ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಮೋಹನನಾದರೂ ಯಾವ ಸಲಹೆ ಯನ್ನು ನೀಡಬಲ್ಲ? ತಾನೇ ಆ ಪರಿಸ್ಥಿತಿಯಲ್ಲಿದ್ದರೆ, ಆಗೇನು ಮಾಡು ತಿದ್ದ? ಮನೆಯಿಂದ ಬರುವ ತಾರುಗಳೆಲ್ಲವೂ ಸಾಮಾನ್ಯವಾಗಿ ಅದೇ ತೆರದವಿರುತ್ತವೆ. ಪರಊರಲ್ಲಿರುವ ಮಕ್ಕಳಿಗೆ ಊರ ನೆನಪನ್ನು ಮಾಡಿಕೊಡಲು ಹೆತ್ತವರು ಹೂಡುವ ತಂತ್ರವಾದರೂ ಇದೇ ತಾನೆ? ನಾಲ್ಕಾರು ದಿನಗಳ ಹಿಂದೆ ಕ್ಷೇಮವೆಂದು ಪತ್ರ ಬಂದಿರುವಾಗ. ತೀವ್ರವಾಗಿ ಅಷ್ಟೊಂದು ಬಲಿಯುವ ರೋಗವಾದರೂ ಏನಿರಬಹುದು? ಆದರ ಮೇಲೆ ನಿರುದ್ಯೋಗಿಯೊಬ್ಬನು ಊರಿಗೆ ಮರಳಬೇಕಾದರೂ ಹಣ ಬೇಡವೆ? ಟಿ. ಎಂ. ಓ. ಬಂದಿದ್ದರೆ, ತೀವ್ರತೆ ನಿಜವಾಗಿಯೂ ಇತ್ತು ಎನ್ನ ಬಹುದು.ಕೇವಲ ತಾರು ಎಂದರೆ, "ಒಂದೆರಡು ದಿನ ತಡವಾದರೂ ಚಿಂತೆ ಯಿಲ್ಲ. ಅಂತೂ ಒಮ್ಮೆ ಬಂದು ಹೋಗು. ನಮಗೆಲ್ಲಾ ನಿನ್ನನ್ನು ಕಾಣುವ ಆಸೆ ಮಿತಿಮೀರಿದೆ" ಎಂದೇ ಅರ್ಥ. ಈ ಹಿಂದೆಯೂ ತಂದೆಯವರು "ನಿನ್ನ ನೆನಪಾಗುತ್ತಿದೆ; ಕೆಲಸವಿಲ್ಲದಿದ್ದರೂ ಚಿಂತೆಯಿಲ್ಲ; ಇದ್ದುದನ್ನೇ ಪಾಲುಂಡು ನಗು ಮುಖದಿಂದಿರೋಣ"ವೆಂದು ನಾಲ್ಕಾರು ಬಾರಿ ಬರೆ ದಿದ್ದರು. ಈ ತಾರು ಆದರ ಅಂತಿಮ ಅಸ್ತ್ರವೆಂದು ಮೋಹನ ಊಹಿಸಿ ನಿಶ್ಚಯಕ್ಕೆ ಬಂದುದು ಸ್ವಾಭಾವಿಕ.

'ಏನು ಮಾಡಲಿ ಮೋಹನ?" ಎಂಬ ಪ್ರಶ್ನೆಗೆ ಉತ್ತರಕೊಡಬೇ

ಕಾಗಿತ್ತು. ಏನೂ ಉತ್ತರ ನೀಡದೆ ಹೋದರೆ, ಅಪರಿಚಿತ ಬೊಂಬಾಯಿ ಯಲ್ಲಿ ರಾಮುವಿಗೆ ಬೇರಾರು ಹಿತವರಿದ್ದರು? ಎಂತಲೇ, "ರಾಮು, ಊರಿಗೆ ಮರಳುವುದು ಅಗತ್ಯ. ಆದರೆ, ಇದೀಗ ಕೈಗೆ ಬಂದ ತುತ್ತನ್ನು ಅಲ್ಲಿಯೇ ಕೈಬಿಡುವುದು ಸರಿಯಲ್ಲ. ಆದುದರಿಂದ ಹೇಗೂ ಕೆಲಸಕ್ಕೆ ಹಾಜರಾಗಲು ಹೊರಟಿದ್ದಿ. ಅಲ್ಲಿ ಹೋಗಿ, ಇಂದು ಸೇರು. ಕಂಪೆನಿಯ ಮೆನೇಜರರು ದಯಾಶೀಲರೆಂದು ಕೇಳಿದ್ದೇನೆ. ಸಂಜೆಗೆ ಅವರನ್ನು ಕಂಡು, ತಾರಿನ ಸುದ್ದಿಯನ್ನು ತಿಳಿಸಿ ಮತ್ತೆ ಒಂದು ವಾರದ ರಜೆಯನ್ನು ಕೇಳು. ಇಲ್ಲವೆನ್ನಲಾರರು. ನಾಳೆ ಮುಂಜಾನೆಯ ರೈಲಿನಲ್ಲಿ ಹೊರ ಟರೆ ನಾಳಿದು ಊರು ತಲಪುತ್ತದೆ" ಎಂದ.

ಉದ್ಯೋಗಿಯಾಗ ಹೊರಟ ರಾಮುವಿಗೂ ಈ ಸಲಹೆ ಸರಿ ಕಂಡಿತು. ಹಾಗೆಯೇ ಮಾಡುವೆನೆಂದು ಅವನು ಬಗೆದು, ದುಃಖದಿಂದ ನೊಂದ ಮುಖವನ್ನೊಮ್ಮೆ ನಳ್ಳಿ ನೀರಿನಿಂದ ತೊಳೆದು ಒರಸಿ, ಬೂಟು ಸಿಕ್ಕಿಸಿ ಹೊರ ನಡೆದ.

ನಿರುದ್ಯೋಗಿಯಾಗಿ ದಿನ ದೂಡುತಿದ್ದವನಿಗೆ ಉದ್ಯೋಗ ಪ್ರಾಪ್ತ ವಾದ ದಿನವೆಂದರೆ, ದರಿದ್ರನಿಗೆ ಕೊಪ್ಪರಿಗೆ ಸಿಕ್ಕ ದಿನದಂತೆ. ಮೂಡ ಲೊಂದು ಉದ್ಯೋಗವಿಲ್ಲದೆ ಹೋದರೆ, ತಿಂದ ಅನ್ನವಾದರೂ ಮೈಗೆ ಹಿಡಿಯದು; ಕುಬೇರನಿರಲಿ, ಕಂಗಾಲನೇ ಇರಲಿ, 'ಉದ್ಯೋಗಂ ಪುರುಷ ಲಕ್ಷಣಂ' ಎಂದು ನಮ್ಮ ಹಿಂದಿನವರೇ ಅಂದಿದ್ದಾರೆ.

ಅದು ಅನುಭವದಿಂದ ಬಂದ ಮಾತು. ನಿರುದ್ಯೋಗಿಯಾಗುವುದೂ ಅಸ್ವಸ್ಥನಾಗುವುದೂ ಸಮಾನ ದುಃಖಗಳು. ಹಾಗಿರುವಾಗ, ಮೋಹ ನನಿತ್ತ ಸಲಹೆ ರಾಮುವಿಗೂ ಸರಿಕಂಡುದು ಸಹಜ.

ನಿಶ್ಚಿತ ಸಮಯಕ್ಕೆ ಅರ್ಧ ತಾಸು ಬೇಗನೇ ಪ್ರಕಾಶ ಮತ್ತು ಕಂಪೆನಿಯ ಕಾರ್ಯಾಲಯವನ್ನು ಮುಟ್ಟಿದ ರಾಮುವನ್ನು ಜವಾನ ನೊಬ್ಬನು ಎದುರುಗೊಂಡನು. ಅವನಿಂದ ಮೆನೇಜರರ ಬಗ್ಗೆ ಪ್ರಶ್ನಿಸಿ ತಿಳಿದುಕೊಂಡ ರಾಮುವಿಗೆ ತುಸು ಸಮಾಧಾನದ ಉಸಿರು ಬಿಡುವಂ ತಾಯಿತು. ತನ್ನ ಆಪದ್ಬಾಂಧವರಾದ ಭಾವ ಮತ್ತೀಗ ಮೆನೇ

ಜರ—ಇವರ ಕಡೆಗೆ ಹರಿದಿದ್ದ ರಾಮುವೀಗ ದ್ವಿಮಾರ್ಗಗಾಮಿಯಾಗಿ ತಿದ್ದ. ಒಂದನ್ನು ಮಾತ್ರ ಹಿಡಿಯಲಾರದೆ ಎರಡರಲ್ಲೂ ಒಂದೊಂದು ಪಾದವಿಟ್ಟಂತಾಗಿದ್ದ. ಇದೇ ಭಾವನಾ ಸಾಗರದಲ್ಲಿ ಮುಳುಗಿದ ರಾಮುವಿಗೆ ಕಂಪೆನಿಯ ನೌಕರರು ಒಬ್ಬೊಬ್ಬರಾಗಿ ಬರತೊಡಗಿದುದಾಗಲಿ, ತನ್ನ ಕಡೆಗೆ ದಿಟ್ಟಿಸುತ್ತ ಒಳ ನಡೆದುದಾಗಲೀ ತಿಳಿಯಲಿಲ್ಲ. ಹೆಚ್ಚೇಕೆ, ಸ್ವಯಂ ಮೆನೇಜರ ಸಾಹೇಬರು ಕಾರಿಂದಿಳಿದು ಒಳ ಹೋದುದರ ಪರಿವೆಯೂ ಆಗಲಿಲ್ಲ 'ರಾಮಕೃಷ್ಣರಾವ್, ತಮ್ಮನ್ನು ಮೆನೇಜರರು ಕರೆಯುತ್ತಾರೆ' ಎಂದು ಜವಾನ ಹೆಗಲಿಗೆ ಕೈ ಮುಟ್ಟಿಸಿ ಕರೆದಾಗಲೇ ರಾಮುವಿಗಾದುದು ಎಚ್ಚರ.

ಹಾಂಹೂಂ ಎಂದು ರಾಮು ಒಳಹೋಗಿ ಕೆಲಸಕ್ಕೆ ಹಾಜರಾಗಿಯೂ ಆಯ್ತು. ಉದ್ಯೋಗಿ ಎನಿಸಿಕೊಂಡುದೂ ಆಯ್ತು. ಆದರೆ ಅವನ ಮನಸ್ಸು ಮಾತ್ರ ಸಂಜೆ ಗಂಟೆ ಆರು ಹೊಡೆಯುವುದನ್ನೇ ಕನವರಿಸುತಿತ್ತು. ಆರು ಬಾರಿಸಿಯೂ ಆಯಿತು. ನೌಕರರೆಲ್ಲರೂ ತಂತಮ್ಮ ದಾರಿಹಿಡಿದು ಹೊರಟರು. ರಾಮು ಮಾತ್ರ ಮೆನೇಜರರ ಕೋಣೆಯ ಬಾಗಿಲ ಬಳಿ ನಿಂತ. ಒಳಗಡೆ ನಾಲ್ಕಾರು ಮಂದಿ ಕೂತು ಏನನ್ನೋ ಮಾತಾಡಿಕೊಳ್ಳುತಿದ್ದರು. ಜವಾನನನ್ನು ವಿಚಾರಿಸಿದಾಗ ಈ ಮಾತುಕತೆ ಪಕ್ಕ ಮುಗಿಯುವಂತಿಲ್ಲವೆಂದೂ ತಿಳಿಯಿತು. ಆದರೆ, ತನ್ನ ಕೆಲಸವಾಗಬೇಕಾದರೆ, ಅವರ ಬಿಡುವನ್ನು ಅರಸಿ ಹೋಗಬೇಕು; ಅದಕ್ಕಾಗಿ ಕಾದುನಿಂತ; ನಿಂತು ಕಾಲು ಬತ್ತಿ ಹೋಗಲು ಬೆಂಚಿಯಲ್ಲಿ ಕುಳಿತ. ಮತ್ತೆ, ಅದೇ ಚಿಂತೆ, ಮೆನೇಜರರು ಆಗದು ಎಂದರೆ? ಮರುಗಳಿಗೆಯಲ್ಲೇ ತನ್ನ ಕಲ್ಪನೆಯು ತಲೆಬುಡವಿಲ್ಲದ್ದೆಂದವನಿಗೆ ತೋರುತಿತ್ತು. ಪ್ರಥಮ ದರ್ಶನದಲ್ಲಿಯೇ ಮೆನೇಜರರು ದೇವತಾ ಮನುಷ್ಯನೆಂದಾತನಿಗೆ ಮನವರಿಕೆಯಾಗಿತ್ತು.

ರಾತ್ರೆ ಒಂಬತ್ತು ಘಂಟೆಯ ವರೆಗೂ ಅವರ ಮಾತು ಮುಗಿದಂತೆ ಕಾಣಲಿಲ್ಲ. ಆದರೂ. ಹೊರಡುವ ಸಿದ್ಧತೆ ಮಾಡಿದರು. ಮೆನೇಜರರು ಅತಿಥಿಗಳನ್ನು ಹಿಂದಿಟ್ಟುಕೊಂಡು, ಕಾರಿನ ಬಳಿಗೆ ನಡೆಯುತಿದ್ದರು. ಅವಕಾಶ ತಪ್ಪಿಸಿಕೊಳ್ಳಬಾರದೆಂದು ರಾಮು ಮುಂದೆ ನಡೆದು, ಅವರನ್ನು

ಕಂಡು, "ಗುಡ್ ನೈಟ್ ಸಾರ್" ಎಂದ. ಅವರು, 'ಹಲೋ, ರಾಮು ಕಿಷನ್.ಗುಡ್ ನೈಟ್! ಹೌ ಆರ್ ಯು ಗೋಯಿಂಗ್ ಓನ್?"ಎಂದರು. 'ವೆರಿವೆಲ್ ಸರ್' ಎಂಬ ಆತನ ಉತ್ತರಕ್ಕೆ, 'ವೆರಿಗುಡ್' ಎಂದು ಕಾರನ್ನು ಹತ್ತಿಯೇ ಬಿಟ್ಟರು. ಅತಿಥಿಗಳೂ ಅವರ ಹಿಂದೆ ಕಾರೇರಿದರು. ನಿಮಿಷಾರ್ಧದಲ್ಲಿ ಕಾರು ಸ್ಟಾರ್ಟಾಗಿ ಅದೃಶ್ಯವಾಯಿತು.

ರಾಮು ಭಾರವಾದ ಹೃದಯದೊಡನೆ ತಲೆಯನ್ನೂ ಹೊತ್ತು ರೂಮಿಗೆ ಮರಳಿದ. ಆತನ ಬರವನ್ನೇ ನಿರೀಕ್ಷಿಸುತ್ತ ಮೋಹನ ಕುಳಿತಿದ್ದ. ನಡೆದುದನ್ನು ತಿಳಿದ ಆತ ಸಮಾಧಾನ ಮಾಡಿದ— "ನಮ ಗೇನೋ ನಮ್ಮದೇ ಚಿಂತೆ. ಅವರಿಗೆ ಹಾಗೇನು? ತನ್ನ ಸಂಸಾರದ ಯೋಚನೆ ಮಾತ್ರವಲ್ಲದೆ ಇಡಿಯ ಕಂಪೆನಿಯ ಚಿಂತೆಯೂ ಇದೆ. ಆದರ ಪಾಲುದಾರರು, ಗಿರಾಕಿಗಳು, ನೌಕರರು, ಪೂರೈಕೆದಾರರು ಇನ್ನು ಯಾರು ಯಾರೋ ಎಲ್ಲರನ್ನೂ ಸಮ ತೂಗಿಸಿ ಹೋಗದಿದ್ದರೆ, ಆಗು ತ್ತದೆಯೆ? ನಾಳೆ ಬೆಳಿಗ್ಗೆ ಹೋದವನೇ ವಿಚಾರಿಸು, ಆಗ ಹೆಚ್ಚಾಗಿ ಬಿಡುವಿರುತ್ತದೆ."

ಸ್ಫೂರ್ತಿಗೊಂದು ಸಮಾಧಾನವಾದರೂ ಇದ್ದರೆ ತುಸು ಅಯ್ಯಬ್ಬ ಅನ್ನಿಸುತ್ತದೆ. ಅಂತೆಯೇ ರಾಮುವಿನ ನೊಂದ ಹೃದಯಕ್ಕೆ ಮೋಹ ನನ ಸಾಂತ್ವನ ತುಸು ಆರಾಮವಿತ್ತಿತು.

ಮರುದಿನ ಮೆನೇಜರರನ್ನು ಕಂಡ ರಾಮುವಿಗೆ ಸಂತೋಷದ ಸ್ವಾಗತ ಸಿಕ್ಕಿತು. ನೌಕರರು—ಮತ್ತು ಮೆನೇಜರರ ನಡುವೆ ಸಹೋ ದರ ಭಾವನೆಯಿರಬೇಕು ಎಂಬ ಅವರ ವಿನಯದ ಮಾತುಗಳು ಅವ ನನ್ನು ಮುಗ್ಧಗೊಳಿಸಿದುವು. ರಾಮು ಮೆಲ್ಲನೆ ತನಗೆ ಬಂದಿದ್ದ ತಾರಿನ ಕಾಗದವನ್ನು ಮುಂದಿಟ್ಟ; ಅದನ್ನು ನೋಡಿದ ಮೆನೇಜರರೂ ಅವಾಕ್ಕಾ ದರು. "ಸರಿ, ನೀವು ಹೋಗಬೇಕಾಗಿದೆ ತಾನೆ? ಯಾವಾಗ ಹೋಗು ತ್ತೀರಿ?" ಎಂದರವರು.

"ತಾವು ಹೇಳಿದ ದಿನ.."

"ಹಾಗೆಂದರಾಗುತ್ತದೆಯೆ? ಪ್ರಾಯಃ ನಿನ್ನೆ ನೀವು ಕಾದದ್ದೂ ಇದಕ್ಕೇ ಇರಬೇಕು, ಅಲ್ಲವೆ?"

"ಹೌದು ಸರ್?"

"ಆಗಲೇ ಹೇಳಬಹುದಿತ್ತಲ್ಲ? ಇಂದು ಮುಂಜಾನೆಯೇ ಟ್ರೇನು ಹಿಡಿಯುಬಹುದಿತ್ತು."

ರಾಮು ಮೌನನಾದ. ಮೆನೇಜರರೇ ಮುಂದುವರಿಸಿದರು ಮಾತನ್ನು. "ಹೂಂ, ನಿಮಗೇನು ಹೆದರಿಕೆಯಾಯಿತೆ? ನಾನಾದರೂ ಮನುಷ್ಯನಲ್ಲವೆ? ಸರಿ, ಈಗ ಹೊರಡುತ್ತಿರಾ? ಅಥವಾ ನಾಳೆ ಮುಂಜಾನೆ...."

"ನಾಳೆ ಮುಂಜಾನೆ ಹೊರಡುತ್ತೇನೆ ಸರ್. ಆದುದರಿಂದ ಒಂದು ವಾರ...."

"ಆದೆಲ್ಲಾ ಆ ಮೇಲೆ ತಾನೆ? ನಿನ್ನೆ ಬೆಳಿಗ್ಗೆಯೇ ಹೇಳಬಾರದಿತ್ತೇ? ರಿಪೋರ್ಟಿಂಗ್ ಡೇಟನ್ನೇ ಮುಂದುವರಿಸುತಿದ್ದೆ. ಇರಲಿ, ಆದುದು ಆಯಿತಲ್ಲ?"

ರಾಮುವಿನ ಹೃದಯ ಮೆನೇಜರರ ಕೃಪೆಗೆ ಭಕ್ತಿಯಿಂದ ಅವನತ ವಾಯಿತು. ಅಂತಹ ಉದಾರಿಯೂ ದಯಾಳುವೂ ಆದ ಮೆನೇಜರರ ಪಾದ ತೊಳೆದು ನೀರು ಕುಡಿಯಬೇಕು ಎಂದುಕೊಂಡ. ದೇಶದಲ್ಲಿ ಕಮ್ಯುನಿಜಂ ಬೆಳೆಯುವುದಂತೆ! ಅಧಿಕಾರ ಸ್ಥಾನದಲ್ಲಿರುವವರು ನೌಕರ ವರ್ಗವನ್ನು ಮೆಟ್ಟನಿಲ್ಲಲು ಹವಣಿಸುವುದೊಂದನ್ನು ಬಿಟ್ಟರೆ, ಸ್ವಾಮಿ-ಸೇವಕ ಸಂಬಂಧ ಮಧುರವಾಗುವುದಿಲ್ಲವೆ? ಈ ಮೆನೇಜರರಂತಹರೇ ಎಲ್ಲೆಡೆಯೂ ಅಧಿಕಾರಿಗಳಾಗಿದ್ದರೆ ಕಮ್ಯುನಿಜಂಗೆ ಖಂಡಿತಕ್ಕೂ ಮುಟ್ಟುಗೋಲು— ಎಂದು ಆತನಂದುಕೊಂಡ. ಸಂಜೆ ಮರಳಿದವನೇ ಮೋಹನನಿಗೆ ಸಂಗತಿ ತಿಳಿಸಿದಾಗ ಅವನ ಕೊರಳು ಕಟ್ಟಿಬಂದಿತ್ತು.

ಮಾರನೆಯ ದಿನ ಪ್ರಕಾಶ ಮತ್ತು ಕಂಪೆನಿಯ ಮೆನೇಜರರು ನೌಕರರ ಹಾಜರಿ ಪುಸ್ತಕವನ್ನು ಎಂದಿನಂತೆ ಪರಿಶೀಲಿಸುತಿದ್ದರು. ರಾಮಕೃಷ್ಣರಾವ್‌ರ ಕಲಮನ್ನೂ ಕಂಡರು. ಅವರಿಗೆ ಎಲ್ಲಿಲ್ಲದ ವಿಸ್ಮಯಾಶ್ಚರ್ಯಗಳಾದುವು. ರಾಮುವೂ ಸಹಿಹಾಕಿದ್ದ. ಕೂಡಲೇ ಬೆಲ್ ಮಾಡಿ ಜವಾನನ ಮೂಲಕ ಆತನನ್ನು ಕರೆಸಿಕೊಂಡುಕೇಳಿದರು.:

"ಏನು ಮಿಸ್ಟರ್, ಊರಿಗೆ ಹೋಗುತ್ತೇನೆಂದು ಹೋಗಲಿಲ್ಲ?"

"ಅದರ ಆವಶ್ಯಕತೆ ಉಳಿಯಲಿಲ್ಲ ಸರ್" ರಾಮು ಕಣ್ಣೀರೊರಸುತ್ತ ಹೇಳಿದ.

ಪಕ್ಕದ ಜವಾನ ಒಂದು ತಾರನ್ನೂ ಅದಕ್ಕೆ ಲಗ್ತೀಕರಿಸಿದ ಒಂದು ಪತ್ರವನ್ನೂ ಮೇಜಿನ ಮೇಲಿಂದ ಎತ್ತಿ ಮುಂದಿಟ್ಟ. ಆ ತಾರೇ ಮೆನೇಜರರಿಗೆ ರಾಮುವಿನ ಒಗಟು ನುಡಿಯನ್ನು ಬಿಡಿಸಿ ಹೇಳಿತ್ತು.

"Madhava Expired".

# ೬ ಚಂದ್ರನ ಚಾರು ಹಾಸ

ಸಂಧ್ಯಾಸಮಯ. ಸೂರ್ಯನು ಪಶ್ಚಿಮ ಸಾಗರದಲ್ಲಿ ಅಸ್ತಂಗ ತನಾಗುವ ಸಿದ್ಧತೆಯಲ್ಲಿದ್ದನು. ವರ್ಷಾಕಾಲದ ದಿನವಾದರೂ ಆಗ ಸದ ದಟ್ಟವಾದ ಮುಗಿಲುಗಳು ಕಳೆದ ಹದಿನೈದು ದಿನಗಳಲ್ಲಿ ಎಡೆ ಬಿಡದೆ ತಮ್ಮ ಪ್ರಭಾವವನ್ನು ಪ್ರದರ್ಶಿಸಿದ್ದುದರಿಂದ ಅಂದು ವಿರಳ ವಾಗಿ ಹರಿದು ಹಂಚಿ ಹರಿಯುತಿದ್ದುವು. ಮುಳುಗುವ ನೇಸರನ ಹೊಂಬಣ್ಣ ತುಂಬಿ ಹರಿಯುವ ನದಿಯ ಕೆನ್ನೀರಿನಲ್ಲಿ ಬಿದ್ದು ಶೋಭಾ ಯಮಾನವಾಗಿ ಕಾಣುತಿತ್ತು; ಚಿನ್ನ ಮತ್ತು ಹವಳಗಳು ಒಂದೆಡೆ ಸೇರಿ ಬರೆದ ರಂಗವಲ್ಲಿಯನ್ನು ಸ್ಮರಣೆಗೆ ತರುವಂತಿತ್ತು. ನದಿಯ ಇಕ್ಕಡೆಯ ವಿಶಾಲವಾದ ಗದ್ದೆಗಳು ನೆರೆಗೆ ತುತ್ತಾಗಿ ಹೋಗಿ ಈಗ ಕೇವಲ ಬಟ್ಟ ಬಯಲಾಗಿದ್ದುವು. ನಾಟಿದ ಆಗೆಯೆಲ್ಲವೂ ಕೊಚ್ಚಿ ಹೋಗಿ, ಕಳೆಗಳು ಜಮೆಯಾಗಿದ್ದುವು. ಅಲ್ಲಲ್ಲಿ, ದೂರದೂರದಲ್ಲಿದ್ದ ಮುರುಕು ಗುಡಿಸಲುಗಳು, ಮುರಿದು ಬಿದ್ದಿದ್ದುವು. ಉಕ್ಕಿ ಹರಿದ ನದಿಯ ಪ್ರವಾಹದಿಂದ ಪೀಡಿತರಾಗಿ ಆ ಊರಿನ ಎಲ್ಲ ರೈತರೂ ನೊಂದು ಹೋಗಿದ್ದರು.

ಭಾರವಾದ ಹೃದಯವನ್ನು ಹೊತ್ತ ಬೂದ ಎಡವುತ್ತ ನದಿ ದಂಡೆಯಲ್ಲಿ ಬಂದು ನಿಂತ. ಅದಕ್ಕೂ ಶಕ್ತಿ ಸಾಲದೆ ಆತ ಅಲ್ಲೇ ಬಂಡೆಗಲ್ಲಿನ ಮೇಲೆ ಕುಕ್ಕುರಿಸಿದ. ಆತನ ತಲೆ ಭಾರವಾಗಿತ್ತು, ಮುಖ ಮುದುಡಿತ್ತು. ದೃಷ್ಟಿ ಶೂನ್ಯವಾಗಿತ್ತು, ಕಿವಿ ಕಿವುಡಾಗಿತ್ತು, ಬಾಯಿಯೂ ಬೀಗಮುದ್ರೆಗೀಡಾಗಿತ್ತು, ಕೈ ಕಾಲುಗಳು ನೋಯು ತಿದ್ದುವು. ಆತ ಒಂದು ಬಾರಿ ತನ್ನ ವಿಶಾಲವಾದ ಗದ್ದೆಗಳತ್ತ ದೃಷ್ಟಿ ಹರಿಸಿದ; ಆದರೆ, ಅದು ಎಲ್ಲೆಲ್ಲೂ ಶೂನ್ಯತೆಯನ್ನು ಕಂಡು ಮರಳಿ ಆತನಲ್ಲಿ ಕೂಡಿತು. ಅವನ ನೊಂದ ಮನ ಮರುಗ ತೊಡಗಿತು.

ತನ್ನ ಪೈರು ಮಾತ್ರವಲ್ಲ, ಕೋಣ, ದನಕರುಗಳು ಮನೆಮಾರು ಎಲ್ಲವನ್ನೂ ಕಳೆದುಕೊಂಡ ಹತಭಾಗ್ಯರಲ್ಲಿ ಬೂದನೂ ಒಬ್ಬನಾಗಿದ್ದ! ನೆರೆಯೇನೊ ಊರಲ್ಲಿ ಪ್ರತಿ ವರ್ಷವೂ ಬರುತ್ತದೆ; ಆದರೆ, ಈ ವರ್ಷದಂತೆ ಬಿರುಸಾಗಿ ಬಂದ ನೆರೆ ಹಿಂದೆಂದೂ ಬಂದಿರಲಿಲ್ಲ. ಬಂದರೂ ಇಷ್ಟು ದಿನ ನಿಂತಿರಲಿಲ್ಲ. ಆದರೆ, ಈ ಬಾರಿಯ ಸೃಷ್ಟಿ ವೈಚಿತ್ರ್ಯದಿಂದಾಗಿ ಅದರ ವಿಕರಾಳ ಪ್ರಭಾವದಿಂದಾಗಿ ಇಂತಹ ದುಸ್ಥಿತಿ ಊರ ರೈತರಿಗೆಲ್ಲ ಬಂದೊದಗಿತ್ತು.

ಇದನ್ನೆಲ್ಲಾ ಯೋಚಿಸಿದ ಬೂದನ ತಲೆ ಮತ್ತಷ್ಟು ಭಾರವಾಯಿತು. ಅದವನ ಕುತ್ತಿಗೆಯಲ್ಲಿ ನೆಟ್ಟಗೆ ನಿಲ್ಲಲು ಕೇಳಲಿಲ್ಲ. ಆತ ತನ್ನ ತೊಡೆಗಳೆಡೆಯಲ್ಲಿ ತಲೆಯನ್ನು ಅಡಗಿಸಿಟ್ಟು, ಅಳತೊಡಗಿದನು. ಈ ಅಳುವೇ ತುಸು ಗಟ್ಟಿಯಾಗಿ ಸುತ್ತಮುತ್ತ ಅಲೆಅಲೆಯಾಗಿ ವ್ಯಾಪಿಸಿತು. ಸೂರ್ಯನಾದರೂ ನದೀನೀರಿನೊಡನೆ ತನ್ನ ಕಿರಣಗಳಿಂದ ಕೇಳಿಯಾಡಿಯಗಾಡಿ ಸೋತು ಪಡುಗಡಲಲ್ಲಿ ಮುಳುಗಿಬಿಟ್ಟ.

ಹುಣ್ಣಿಮೆಯ ಚಂದ್ರ ಮೂಡಲಲ್ಲಿ ಮೂಡಿ ಏರುತ್ತ ಬಂದನು. ತಿಳಿ ಮೋಡದಿಂದ ಆಚ್ಛಾದಿತನಾಗಿದ್ದ ಚಂದ್ರ ಬಿಂಬದ ಚಂದವನ್ನು ಸವಿಯುವ ಸಹೃದಯತೆ ಆ ಊರ ಜನತೆಗಿರಲಿಲ್ಲ. ಅವರ ಹೃದಯ ತುಂಬ ನಿರಾಶೆಯ ಕಾರ್ಮೋಡವೇ ತುಂಬಿ ಹರಿದಿತ್ತು. ಆದರೆ, ಸೃಷ್ಟಿ ಯಾರನ್ನೂ ಕಾಯುವುದಿಲ್ಲ. ಅದು ತನ್ನ ಪಥದಲ್ಲಿ ನಡೆದೇ ನಡೆಯುತ್ತದೆ. ಚಂದ್ರನ ಮುಗುಳು ನಗೆ ಆ ಬಂಜರಾಗಿದ್ದ ಭೂಮಿಯನ್ನೂ ನಗಿಸುತಿತ್ತು. ಅಲ್ಲಿ ಕೂಡಿದ್ದ ಕಳೆಯೊಡನೆಯೂ ಚಂದ್ರಿಕೆ ಚಲ್ಲಾಟವಾಡುತಿತ್ತು, ತಾನು ಒಳ್ಳೆಯವನಾದರೆ ಊರು ಒಳ್ಳೆಯದು ಎನ್ನುತ್ತಾರಲ್ಲಾ, ಹಾಗೆ.

ದೂರದಲ್ಲಿ ಸ್ನಿಗ್ಧ ಮನೋಹರ ಹೃದಯಾಕರ್ಷಕವಾದ ವೇಣುಗಾನವೊಂದು ಕೇಳಿಸತೊಡಗಿತ್ತು. ಅದು ಕ್ರಮೇಣ ಸಮೀಪವೆನಿಸುತ್ತ ಬರುವಂತೆ ಭಾಸವಾಯಿತು. ಬೂದನೂ ತಲೆಯೆತ್ತಿ ಈ ಸ್ಮಶಾನದಲ್ಲೂ ಆನಂದಪಡುವ ಕಡು ಮೂರ್ಖ ಬೇತಾಳನಾರು ಎಂದು ಯೋಚಿಸ ತೊಡಗಿದನು. ಹೌದು, ಆ ವೇಣುವಾದಕ ಮುರಲಿ

ನುಡಿಸುತ್ತ ಹಾಲು ತಿಂಗಳ ಬೆಳಕಿನಲ್ಲಿ ತನ್ನತ್ತ ಕಡೆಗೆ ಬರುತ್ತಿರುವುದು ಗೋಚರವಾಯಿತು. ಅದು ಯಾರಿರಬಹುದು ಎಂದು ಊಹಿಸುವಷ್ಟರಲ್ಲಿಯೇ ಮುರಲೀನಾದ ತನ್ನ ಬೆನ್ನ ಹಿಂದೆಯೇ ಕೇಳಿಬರತೊಡಗಿತು.

"ಏನಯ್ಯಾ, ಬೂದ, ತಲೆಗೆ ಕೈಯಿಟ್ಟು ಕೂತಿದ್ದಿಯಲ್ಲಾ?"

"ಮತ್ತೇನು ಮಾಡಬೇಕು? ನಿನ್ನ ಜತೆಗೆ ತಾಳಹಾಕಿ ಕುಣಿಯಬೇಕಿತ್ತೆ?" ಬೂದ ತುಸು ಕುಪಿತನಾಗಿಯೇ ಮರು ಸವಾಲು ಹಾಕಿದನು.

"ಹಾಗಲ್ಲ, ಇನ್ನು ಶೋಕಿಸಿ ಪ್ರಯೋಜನವೇನು? ಆದುದೆಲ್ಲಾ ಆಯಿತು. ಮುಂದೆ ಬಾಳುವ ವಿಧಾನವಾವುದೆಂದು ಯೋಚಿಸದೆ ಸುಮ್ಮನೆ ದುಃಖಿಸಿ ಕೂತರೆ, ಅದರಿಂದ ಸಾಧಿಸುವುದೇನು?"—ವ್ಯಕ್ತಿ ಕೇಳಿತು.

"ನೀನನ್ನುವುದೂ ಸರಿಯೇ. ಆದರೆ ನೋಡು, ಇನ್ನೂರು ರೂಪಾಯಿಕೊಟ್ಟು ಹೊಸತಾಗಿ ತಂದ ಜೋಡು ಆ ನೆರೆಯ ನೀರಿನಲ್ಲಿ ಹೊಯ್ದು ಹೋಗುತ್ತಿರುವುದು ಇನ್ನೂ ನನ್ನ ಕಣ್ಣ ಮುಂದೆ ನಲಿಯುವಂತಿದೆ! ಅಯ್ಯೊ, ಆ ಕಾಳಿಯ ಕರು ತಾಯಿ ಹೋದ ಮರುಕದಿಂದ ಜೀವ ಬಿಡುವಾಗ 'ಅಂಬಾ' ಎಂದ ಮೂಕ ವೇದನೆಯನ್ನು ಹೇಗೆ ಮರೆಯಲಿ ಹೇಳು!" ಹೀಗೆ ಹೇಳುತಿದ್ದಂತೆ ಬೂದ ಭಾವಾವೇಶಗೊಂಡವನಂತಾಗಿದ್ದುದು ಕಂಡು ಬಂತು.

"ಏನಯ್ಯಾ, ಈಗ ಏನು ಮಾಡಬೇಕೆಂದಿರುವೆ?"

"ಮಾಡುವುದೇನು ನಮ್ಮ ದುರದೃಷ್ಟಕ್ಕಾಗಿ ಅಳುವುದು."

"ಹಾಗಾದರೆ, ಅದಕ್ಕಿಂತ ಉತ್ತಮವಾದ ಕಾರ್ಯವೊಂದನ್ನು ಮಾಡು......" ವ್ಯಕ್ತಿ ತುಸು ನಿಶ್ಚಿತ ಧ್ವನಿಯಲ್ಲೇ ಅಂದಿತು.

ಬೂದ ಆತುರದಿಂದ ಪ್ರಶ್ನಿಸಿದ: "ಏನದು?"

"ಅಲ್ಲ" ಎಲ್ಲಿಯಾದರೂ ಕುತ್ತಿಗೆಗೆ ಭಾರವಾದ ಕಲ್ಲೊಂದನ್ನು ಕಟ್ಟಿ ನದಿಗೆ ಹಾರಿ ಬಿಡು."

ಬೂದನ ಕಪಾಲಕ್ಕೆ ಯಾರೋ ಹೊಡೆದಂತಾಯಿತು. ಅದು ಬೇರಾರೂ ಅಲ್ಲ; ಸದಾ ದುಃಖ ಜೀವಿಯಾಗಿ ಹೊಟ್ಟೆಗಾಗಿ ಯಾರ್ಯಾರ ಮುಂದೆ ಕೈ ಚಾಚುವ ಲಿಂಗನೇ ಆಗಿದ್ದನು. ಅದೇ ಲಿಂಗ ಅದೆಷ್ಟೋ ಬಾರಿ ಬೂದನ ಮನೆ ಬಾಗಿಲನ್ನೂ ಊಟದ ಹೊತ್ತು ಕಂಡಿದ್ದ; ಬೂದನಾದರೂ ಅವನಿಗೆ ಕಾಲಿಗೆ ನೀರಿತ್ತು ಅನ್ನದಾನ ಮಾಡಿದ್ದ. ಆದರೆ, ಇಂದು ಅಂತಹ ತಿರಿಕೂಳಿ ಇಷ್ಟೊಂದು ಗಡದ್ದಿನಲ್ಲಿ ಕೊಳಲೂದುತ್ತ ಸಮಾಧಾನ ಪಡಿಸುತಿದ್ದಾನಲ್ಲಾ, ಇದಕ್ಕೇನು ಕಾರಣ?

ಬೂದ ತನ್ನ ಸಮಸ್ಯೆಯನ್ನು ಒಂದು ಬದಿಗಿಟ್ಟು ಲಿಂಗನನ್ನು ಪ್ರಶ್ನಿಸಿದ— "ಅಲ್ಲ, ಲಿಂಗ ಸಾಯುವುದಕ್ಕೆ ಇಷ್ಟೆಲ್ಲಾ ನೀನು ಹೇಳಬೇಕೆ? ಅಂದೇ ಎಲ್ಲಾ ಹೋಗಿತ್ತು ಆಗಲೇ ಸಾಯುತಿದ್ದೆ. ಆದರೆ, ದೇವರು ನಿಷ್ಕರುಣಿ. ನನ್ನನ್ನುಳಿಸಿ ಎಲ್ಲವನ್ನೂ ಕೊಚ್ಚಿಕೊಂಡು ಹೋದ. ಇರಲಿ; ನಿನಗೇನು, ಪಶ್ಚಿಮದಲ್ಲಿ ಸೂರ್ಯೋದಯವಾದಂತಾಗಿದೆ?"

"ಅಹ್ಹಹ್ಹ, ಅದೇ ಸಮಾಚಾರ ಹೇಳೋಣಾಂತ ನಿನ್ನ ಮನೆ ಕಡೆ ತೆರಳಿದ್ದೆ; ಅಲ್ಲಿ ಯಾರಿದ್ದಾರೆ! ಭೂತವೂ ಇಲ್ಲ. ಇತ್ತ ನದಿಯನ್ನಾದರೂ ಕಾಣೋಣ ಎಂತ ಬಂದರೆ, ನಿನ್ನ ಆಳು ಕೇಳಿಸಿಬಿಟ್ಟು ಬಂದು ಬಿಟ್ಟೆ. ನೋಡು, ಈ ನದಿಗೆ ಸೋಮು ಕಂಬಳದ ಪಕ್ಕದಲ್ಲೇ ಒಂದು ಆಣೆಕಟ್ಟು ಕಟ್ಟಿಸುತ್ತಾರಂತೆ. ಅದಕ್ಕೆ ಕೂಲಿಗಳು ಬೇಕಾಗಿದ್ದಾರಂತೆ. ನಾನು ಇಂದು ಹೋಗಿ ಸೇರಿಕೊಂಡುಬಿಟ್ಟೆ, ದಿನಾ ಎರಡು ರೂಪಾಯಿ ಮಜೂರಿ. ಹಾಗಾದರೆ, ನೀನೇ ಹೇಳು, ನನ್ನ ಭಾಗ್ಯದ ಚಂದ್ರೋದಯವಾಗಿಲ್ಲವೆ?"

ಬೂದ ತಲೆ ಮೇಲೆತ್ತಿ ನೋಡಿದ. ಆಗಸದಲ್ಲಿ ಚಂದ್ರ ನಸು ಬಿಳಿಯ ಮೋಡದ ಹೊದಿಕೆ ಹೊದ್ದುಕೊಂಡು ಮುಗುಳ್ನಗುತಿದ್ದ. ಬೂದನ ತುಟಿಗಳು ತನಗರಿವಿಲ್ಲದಂತೆಯೇ ತೆರೆದವು; ಮೌನವಾಗಿ ಮಂದಸ್ಮಿತವೊಂದು ಅವುಗಳಿಂದ ಹೊರ ಬರುತಿದ್ದುದು ಲಿಂಗನ ಕಣ್ಣುಗಳಿಗೆ ಕಾಣಿಸಿತು.

೨

ದಿನಗಳು ಕಳೆಯುತ್ತ ಬಂದುವು. ಸುಗ್ಗಿಯ ಕಾಲವೂ ಕಾಣಿಸಿತು. ಬೂದ ತನ್ನ ಮನೆಯತ್ತ ಸಾಗುವವನಿದ್ದ. ದಾರಿಯಲ್ಲೇ ಊರ ಶಿವ ಮಂದಿರದ ಸುತ್ತ ನೂರಾರು ಜನರು ಸೇರಿದ್ದುದು ಕಂಡು ಬಂತು. ಅದೇನಿರಬಹುದೆಂಬ ಕುತೂಹಲದಿಂದ ಬೂದನ ಕಾಲುಗಳತ್ತ ನಡೆದುವು.

ದೇವಾಲಯವೆಂದರೆ ತೀರ ಜೀರ್ಣವಾದ ಒಂದು ಗುಡಿ. ಊರ ಪೂಜಾರಿಯ ಮನೆಯೊಂದನ್ನು ಬಿಟ್ಟರೆ, ಆವೂರ ಉಳಿದೆಲ್ಲ ಮನೆಗಳೂ ಶಿವಗುಡಿಯಂತೆಯೇ ಇದ್ದುವು, ಮೊದಲು ಬೂದ ತನ್ನ ಮನೆಯಿಂದ ಹೊರಟಾಗ ಇಲ್ಲವೇ ಮನೆಗೆ ಮರಳುವಾಗ ಈ ಶಿವನಿಗೆ ಭಕ್ತಿಪುರಸ್ಸರವಾಗಿ ಕೈಮುಗಿಯುತಿದ್ದ. ಹಬ್ಬ ಹರಿದಿನಗಳಲ್ಲಿ ಹಣ್ಣುಕಾಯಿಯನ್ನೂ ಒಯ್ಯುತಿದ್ದ. ಆದರೆ, ಈಗ ಆತನ ಪಾಲಿಗೆ ದೇವರೂ ಇಲ್ಲ, ದಿಂಡರೂ ಇಲ್ಲ. ಇಡೀ ಗ್ರಾಮಕ್ಕೆ ಗ್ರಾಮವೇ ನೆರೆಯಲ್ಲಿ ಕೊಚ್ಚಿ ಹೋಗುತ್ತಿರುವುದನ್ನು ಕಣ್ಣಾರೆ ಕಂಡೂ ಕೈಕಟ್ಟಿ ಕುಳಿತಿದ್ದ ಈ ದೇವನ ಮೇಲೆ ಬೂದನಿಗೆ ಎಳ್ಳನಿತು ವಿಶ್ವಾಸ ಅಥವಾ ಭಕ್ತಿಯು ಉಳಿದಿರಲಿಲ್ಲ. ಆತನ ಪಾಲಿಗೆ ದೇವರೂ ದೇವಿಯರೊಂದಿಗೆ ಅದೇ ಕೆನ್ನೀರಲ್ಲಿ ಕೊಚ್ಚಿ ಹೋಗಿದ್ದರು.

ಇಂದು ಬೂದ ಅತ್ತ ತೆರಳಿದುದು, ಶಿವನಿಗೆ ನಮಸ್ಕರಿಸುವುದಕ್ಕಲ್ಲ; ಆ ಜನ ಜಂಗುಳಿ ಏಕೆ ಸೇರಿದೆ ಎಂಬುದನ್ನು ಕಂಡುಕೊಳ್ಳಲು. ಅಲ್ಲಿ ಪೂಜಾರಿ ಮತ್ತು ಒಬ್ಬ ಸರಕಾರಿ ಅಧಿಕಾರಿಗಳ ನಡುವೆ ಮಾತುಕತೆ ನಡೆಯುತಿತ್ತು. ಅಧಿಕಾರಿ ಹೇಳುತಿದ್ದ-"ದೇವಾಲಯ ಹೇಗೂ ಜೀರ್ಣವಾಗಿದೆ. ಹಾಗಿರುವಾಗ, ಅದನ್ನು ಇಲ್ಲಿಂದ ಸ್ಥಳಾಂತರಿಸಿ ತುಸು ದೂರದಲ್ಲಿ ಹೊಸತಾಗಿ ಕಟ್ಟಿದರೆ ಹಾನಿಯೇನು?"

ಪೂಜಾರಿ ದುರುಗುಟ್ಟಿ ಆತನನ್ನೇ ನೋಡುತ್ತ ಉರಿಕಾರುತ್ತ ಹೇಳಿದ-"ಏನೆಂದೆ, ಶಿವನನ್ನು ಕೀಳುವುದೆ? ಗ್ರಾಮ ದೇವನನ್ನು, ಗ್ರಾಮ ರಕ್ಷಕನನ್ನು ದೂರ ಓಡಿಸುವುದೆ? ಅನ್ಯಾಯ, ಅಪರಾಧ, ದೈವದ್ರೋಹ!....ಅಯ್ಯಾ ಶೂಲಧಾರಿ, ಇಂತಹ ಅವಾಚ್ಯವಾಕ್ಯಗಳನ್ನು

ಆಲಿಸುವ ಈ ಕರ್ಣಗಳನ್ನು ಕಿವುಡಾಗಿಸು. ಆಡುವ ಈ ಮೂರ್ಖ ನಾಸ್ತಿಕನ ನಾಲಿಗೆಯನ್ನು ಸೀಳಿಬಿಡು."

ಅಧಿಕಾರಿ ಸಮಾಧಾನದಿಂದಲೇ ಹೇಳಿದ— "ಸ್ವಾಮಿ, ಊರ ದೇವಾಲಯ ತೆಗೆಯಬೇಕೆಂದು ನಾವನ್ನುತ್ತಿಲ್ಲ. ಹೇಗೂ ಮುರಿದಿದೆ. ಉತ್ತಮವಾದ ರೀತಿಯಲ್ಲಿ ಬೇರೊಂದನ್ನು ತುಸು ಬಡಗು ಬದಿಯಲ್ಲಿ ಕಟ್ಟಿಸುವಿರಂತೆ. ಇದರಿಂದೇನೂ ನಿಮ್ಮ ದೇವನಿಗೆ ಸಿಟ್ಟು ಬರಲಾರದು! ಆತನಿಗೇನು, ಉಳಿಯಲೊಂದು ಗುಡಿಯಿದ್ದರೆ ಸಾಕು ತಾನೆ?"

ಪೂಜಾರಿ ತೀಕ್ಷ್ಣವಾಗಿ ಒಮ್ಮೆ ದೇವನ ಬಿಂಬವನ್ನೂ ಇನ್ನೊಮ್ಮೆ ನೆರೆದ ಜನರನ್ನೂ ಮತ್ತೊಮ್ಮೆ ಆ ಅಧಿಕಾರಿಯನ್ನೂ ನೋಡುತ್ತ ಹೇಳಿದ— "ನೋಡಿರಿ, ಈತನು ನಾಸ್ತಿಕನಿರುವಂತೆ ಕಾಣಿಸುತ್ತಾನೆ! ಊರ ರಕ್ಷಕನಾದ ಈತನನ್ನು ಉಚ್ಚಾಟನೆ ಮಾಡಿ ಅನ್ನುತ್ತಾನೆ! ಹಿಡಿಯಿರಿ, ಕಟ್ಟಿ ಹಾಕಿರಿ, ಬಡೆಯಿರಿ."

ಜನರು ಮುಂದುವರಿದು ಬರುತ್ತಿರುವುದನ್ನು ಕಂಡ ಅಧಿಕಾರಿ ಕೇಳಿದ—"ಸ್ವಾಮಿ, ಗ್ರಾಮ ರಕ್ಷಕನಾದ ಈತ ಮಳೆಗಾಲದಲ್ಲಿ ಊರನ್ನು ನೆರೆಯಿಂದೇಕೆ ರಕ್ಷಿಸಲಿಲ್ಲ?"

ಪೂಜಾರಿ, "ನಾಸ್ತಿಕ, ನಾಸ್ತಿಕ! ದೈವದ್ರೋಹಿ" ಎಂದು ಕೂಗಿದ. ಉಳಿದವರು ಆತನನ್ನು ಅನುಕರಿಸಿದರು. ಬೂದ ಮಾತ್ರ, "ಹೌದು, ಈ ಶಿವ ಗ್ರಾಮ ರಕ್ಷಕನಲ್ಲ; ಗ್ರಾಮಭಕ್ಷಕ" ಎಂದುಕೊಂಡು ತನ್ನ ಮನೆಯ ದಾರಿ ಹಿಡಿದು ನಡೆದೇಬಿಟ್ಟ. ಇಲ್ಲಿ ಪೂಜಾರಿ ಅಧಿಕಾರಿಗಳ ದ್ವಂದ್ವ ಮುಂದುವರಿದಿತ್ತು.

೩

ಇನ್ನೂ ಕೆಲವು ದಿನಗಳು ಕಳೆದುವು. ಒಂದು ದಿನ ಸೂರ್ಯೋದಯದ ವೇಳೆ, ಬೂದ ತನ್ನ ಮನೆಯಂಗಳದಲ್ಲಿ ಸುತ್ತಾಡುತಿದ್ದ. ಆಗ, ದೂರದ ನದಿ ಪಕ್ಕದ ತನ್ನ ಗದ್ದೆಯಲ್ಲಿ ಅದಾರೋ ತಿರುಗಾಡುತ್ತಿರುವುದು ಗೋಚರಿಸಿತು. ಇವರಾರಿರಬಹುದು? ಈ ಮುಂಜಾವದ ವೇಳೆಯಲ್ಲಿ ಇವರಿಗಲ್ಲೇನು ಕೆಲಸ ಎಂದುಕೊಂಡು ಆತ ಮೆಲ್ಲನೆ ಗದ್ದೆಯತ್ತ ನಡೆದ. ಅಲ್ಲಿ ಕೆಲವು ಸರಕಾರಿ ಅಧಿಕಾರಿಗಳು ದುರ್ಬೀನು ಟೇಪು

ಗಳನ್ನು ಹಿಡಿದು ಏನನ್ನೋ ನೋಡುತಿದ್ದರು. ಬೂದ ಕುತೂಹಲ ದಿಂದ ಅವರೊಡನೆ ಕೇಳಿದ—“ನೀವಿಲ್ಲಿ ಏನು ಮಾಡುತ್ತಿರುವಿರಿ?”

“ಇಲ್ಲೊಂದು ನದಿಗೆ ಅಣೆಕಟ್ಟು ಕಟ್ಟುವ ಕೆಲಸ ನಡೆಯುತ್ತದೆ ಯಲ್ಲ? ಕಟ್ಟೆಯ ನೀರು ನಿಂತು ಸುತ್ತವ್ಯಾಪಿಸುವಾಗ, ಅದು ಎಲ್ಲಿ ವರೆಗೆ ನಿಂತೀತೆಂದು ಅಳೆಯುತಿದ್ದೇವೆ.”

“ಎಂದರೆ, ಈ ಗದ್ದೆಯ ಮೇಲೂ ನೀರು ನಿಲ್ಲುವುದೆ?”

“ನಿಂತರೂ ನಿಲ್ಲಬಹುದು; ಹೆಚ್ಚಿನಂಶ, ಈ ಗದ್ದೆಯಲ್ಲೂ ಐದಡಿ ನೀರು ನಿಲ್ಲುವುದು.”

“ಹಾಗಾದರೆ, ಕೃಷಿ ಬೆಳೆ ...?”

“ಅದಕ್ಕೇನು? ಕೆಲವೊಂದು ಗದ್ದೆ ನೀರಲ್ಲಿ ಮುಳುಗಿದರೆ, ಸಾವಿರಾರು ಎಕ್ರೆ ಜಮೀನಿಗೆ ನೀರು ದೊರೆತಂತಾಗುವುದಲ್ಲಾ?”

ಬೂದ ಯೋಚಿಸಿ, ಕೊನೆಗೆ ಕೇಳಿದ-“ಒಂದು ವೇಳೆ, ಈ ಗದ್ದೆಯ ಯಜಮಾನ ಇದರಲ್ಲಿ ನೀರು ನಿಲ್ಲಲು ಬಿಡದೆ ಹೋದರೆ?”

ಅಧಿಕಾರಿ ನಕ್ಕು ಹೇಳಿದ—“ಅಯ್ಯಯ್ಯೊ, ಎಂತಹ ಮಾತಾಡು ತ್ತಿರುವಿರಿ? ಈ ಗದ್ದೆ ಹೋದರೇನು? ಗದ್ದೆಯ ಯಜಮಾನ ಬೇರೆಡೆ ಇದೇ ರೀತಿಯ ಗದ್ದೆ ಪಡೆಯಬಹುದು; ಇಲ್ಲವೇ ತಕ್ಕ ಪರಿಹಾರ ಕೊಡಲ್ಪಡುವುದು. ಆತನಿಗೇನೂ ಚಿಂತೆಯಿರಲಾರದು.”

“ನನಗೆ ನಿಮ್ಮ ಗದ್ದೆಯೂ ಬೇಡ; ಪರಿಹಾರವೂ ಬೇಡ. ನನ್ನ ಗದ್ದೆಯಲ್ಲಿ ನೀರು ನಿಲ್ಲುವುದೂ ಬೇಡ”—ಶೂನ್ಯ ಮನಸ್ಕನಾಗಿ ಹೇಳಿದ ಬೂದ.

ಅಧಿಕಾರಿಗೆ ಆಗ ತಿಳಿಯಿತು, ಈತ ಈ ಗದ್ದೆಯ ಯಜಮಾನ ನೆಂದು. ಆತ ಬೂದನಿಗೆ ಅಣೆಕಟ್ಟು ಕಟ್ಟುವುದರಿಂದ ಯಾವ ಯಾವ ಲಾಭಗಳಿವೆಯೆಂಬುದನ್ನು ವಿವರಿಸಿದ, ನೆರೆಗಳನ್ನು ಅದು ಹೇಗೆ ತಡೆಗಟ್ಟಬಲ್ಲುದು, ನೀರಾವರಿಯ ಸೌಕರ್ಯದಿಂದ ಅದೆಷ್ಟು ಬಂಜರು ಭೂಮಿ ಹಸನಾಗುವುದು, ಇದರಿಂದ ದೇಶದ ಸಂಪತ್ತು ಹೇಗೆ ಹೆಚ್ಚಬಲ್ಲುದು ಎಂದು ಮನಂತಾಗಿ ತಿಳಿದ ಬೂದ ಮರುಮಾ

ತಾಡದೆ ಮನೆಯತ್ತ ತೆರಳಿದ. ಆವನ ತಲೆಯಲ್ಲಿ, ಮನಸ್ಸಿನಲ್ಲಿ, ಹೃದಯದಲ್ಲಿ ಒಂದು ಶಾಂತಿಯ ಸೆಲೆ ಕಾಣಿಸಿತು.

ನಾಲ್ಕು ವರ್ಷಗಳನಂತರದ ಮಾತು. ಬೂದನಿಂದು ವೈವಾಹಿಕ ಜೀವನದಲ್ಲಿ ಕಾಲಿಟ್ಟಿದ್ದಾನೆ. ರಾಧಾ ಬೂದನಿಗೊಪ್ಪುವ ಮಡದಿ. ಮನೆತುಂಬ ಕಾಳುಕಡ್ಡಿಗಳು ತುಂಬಿವೆ. ಹೋಳಿ ಹುಣ್ಣಿಮೆಯ ವಿಶೇಷ ಅಡಿಗೆ ಮುಗಿಸಿ, ರಾಧಾ ಮನೆಯಲ್ಲಿ ಕೂರಿದ್ದಾಳೆ, ಪತಿಯ ನಿರೀಕ್ಷಣೆಯಲ್ಲಿ. ಸಂಧ್ಯಾಕಾಲ ಜಾರಿತು. ಮೂಡಲಲ್ಲಿ ಚಂದ್ರನು ಪೂರ್ಣರೂಪದಿಂದ ಮೂಡಿ ಮೇಲೇರತೊಡಗಿದ. ಶಿಶಿರಋತುವಾದರೂ ಶಿವರಾತ್ರಿಯು ಆದಾಗಲೇ ಕಳೆದಿದ್ದುದರಿಂದ ಹಿಮ ದೂರವೋಡತೊಡಗಿತ್ತು; ಮೋಡಗಳು ಹರಡಿದ್ದರೂ ಅದು ಅತ್ಯಲ್ಪವಾಗಿದ್ದವು, ಶರತ್ಕಾಲದ ಮೇಘರಾಶಿಯನ್ನವು ತುಸು ಮಟ್ಟಿಗೆ ಹೋಲುತಿದ್ದವು. ಚಂದ್ರನೊಂದುಬಾರಿ ತನ್ನ ಮುಖವನ್ನು ಮೋಡದೊಳಗೆ ಆಡಗಿಸಿ ತೆಳುವಾದ ಪರದೆಯೊಳಗಿನಿಂದ ಕಲಕಲ ನಗುತಿದ್ದ; ಇನ್ನೊಮ್ಮೆ ತೆರೆಯುರಳಿಸಿ ಹೊರಬಂದು ಭೂಮಾತೆಯನ್ನು ಆಲಂಗಿಸುತಿದ್ದ. ಈ ಚಿನ್ನಾಟವನ್ನು ಕಾಣುತ್ತ, ಬೀಸುವ ತಂಗಾಳಿಗೆ ಮೈಯೊಡ್ಡುತ್ತ, ಅಂಗಳದಲ್ಲಿಟ್ಟಿದ್ದ ಪಡಿಮಂಚದಲ್ಲಿ ಕುಳಿತ ರಾಧೂ ತನ್ನನ್ನು ಯಾರೋ ಕೂಗಿದಂತಾಗಿ ಎದ್ದು ನಿಂತಳು.

"ರಾಧೂ...."

ಹೌದು, ಇದು ಪರಿಚಿತ ಧ್ವನಿಯೆ. ತನ್ನ ಪತಿದೇವರದು. ಆ ಬೆಳದಿಂಗಳ ರಾತ್ರೆಯಲ್ಲಿ ಬೂದ ಚಿಗರಿಯಂತೆ ಹಾರು ಹಾರುತ್ತ ತನ್ನತ್ತ ಬರುತ್ತಿರುವುದು ಕಾಣಿಸಿತು. ಎದ್ದು ನಿಂತು, ಸೀರೆ ಸೆರಗು ಸರಿಪಡಿಸಿ, ಪತಿಯ ಕೈ ಹಿಡಿದು, "ಇದೇನು, ಇಷ್ಟೊಂದು ಉನ್ಮಾದಾವಸ್ಥೆಯಲ್ಲಿದ್ದೀರಿ?"ಎಂದಳು ಮುಗ್ಧೆ.

"ಮೊದಲು ಹೊರಡು; ಆ ಮೇಲೆ ಮಾತು."

"ಅಯ್ಯೋ, ಎಲ್ಲಿಗೇಂದ್ರೆ? ಊಟ ಮಾಡಿಯಾದ್ರೂ, ಹೊರಡಿ."

"ಊಟಗೀಟ ಎಲ್ಲ ಮತ್ತೆ. ಈಗ ಬಾ" ಎಂದ ಬೂದ ರಾಧೆಯ ಕೈಹಿಡಿದು ಎಳೆದುಕೊಂಡೇ ಹೊರಟ.

ಅವರಿಬ್ಬರು ಸೇರಿದುದು ವಿಶಾಲವಾದ ಅಣೆಕಟ್ಟಿನ ಸ್ಥಳವನ್ನು. ಕಲ್ಲು ಸಿಮೆಂಟುಗಳಿಂದ ಕಟ್ಟಿದ ಕಟ್ಟೆ; ಮುಂದುಗಡೆ ಸಾಕಷ್ಟು ವಿಸ್ತಾರವಾಗಿ ನೀರು ನಿಂತಿವೆ. ಬೀಸುವ ತಂಗಾಳಿಯಿಂದ ತುಂಬಿದ ನೀರು ತೆರೆಯೆಬ್ಬಿಸುತ್ತಿದೆ ಚಂದ್ರನ ಬಿಂಬ ಅದರ ನಡುವೆ ನಗುತ್ತಿದೆ! ಚಂದ್ರಿಕೆಯಿಂದ ಹರಡಿದ ನೀರು ಸುವರ್ಣಮಯವಾಗಿರುಂತೆ ಭಾಸವಾಗುತ್ತದೆ. ಅಣೆಕಟ್ಟೆಯ ಕೆಳಗೆ, ದೊಡ್ಡ ತೂಬುಗಳಿಂದ ನೀರು ಬೋರ್ಗರೆಯುತ್ತ ಹರಿಯುತ್ತಿದೆ. ಎಂತಹ ಗಂಭೀರತೆ! ಏನು ಸುಂದರತೆ! ಎಂತಹ ಮನ ಮೋಹಕತೆ! ಪತಿ ಬೂದ ಸತಿ ರಾಧೆಗೆ ಇದನ್ನು ತೋರಿಸಿದ. ಈ ಚಿನ್ನದ ನೀರಿನಿಂದ ನಮ್ಮ ಬಯಲು ಚಿನ್ನದ ಬಯಲಾಯಿತು ಎಂದು ಆಕೆಯ ಕರವನ್ನು ಮೆಲ್ಲನೆ ಪ್ರೇಮಲವಾಗಿ ಅದುಮಿದ. ಆಕೆಯೂ ಅದರಗಳನ್ನು ಅರೆದೆರೆದು ಮೃದು ಮಂದಹಾಸವನ್ನು ಬಿದಿರಿ ಬೂದನ ಕೈಯನ್ನು ತನ್ನ ಹೃದಯಕ್ಕೆ ಒತ್ತಿ ಇಟ್ಟುಕೊಂಡಳು. ಅಲ್ಲೇ ಅನತಿ ದೂರದಲ್ಲಿ ನೂತನವಾಗಿ ಕಟ್ಟಿಸಿದ ಶಿವ ಮಂದಿರದಲ್ಲಿ ಹೋಳಿ ಹಬ್ಬದ ಸಂಭ್ರಮ ನಡೆದಿತ್ತು. ಮನ್ಮಥನ ಅನುಪಮ ಗುಣವನ್ನು ನಾನಾ ಪರಿಯಾದ ಗೀತೆಗಳಿಂದ ಹಾಡಿ ಹೊಗಳುತಿದ್ದರು. ಈ ಗೀತೆಗಳೂ ದೂರದ ಬೆಟ್ಟಗಳಿಗೆ ಬಡೆದು ಅಲ್ಲೇ ಪ್ರತಿಧ್ವನಿಸಿ ಗುಯ್‌ಗುಟ್ಟಿ ಮೃದು ಹಿಮ್ಮೇಳವೊದಗಿಸಿದಂತಾಗಿತ್ತು.

ಬೂದ—ರಾಧೆಯರು ಆನಂದೋನ್ಮಾದದಲ್ಲಿ ಕಾಲುವೆಗಳನ್ನು ದಾಟಿ ನೇರಾಗಿ ಮಂದಿರರಂಗದಲ್ಲಿ ಕಾಲಿಟ್ಟರು. ಅಷ್ಟರಲ್ಲೇ ಊರ ಜನವೆಲ್ಲವೂ ಬಂದುಸೇರಿತ್ತು. ಹಾಡು ಮುಂದೆ ಸಾಗುತಿತ್ತು. ಬೂದ ರಾಧೆಯರೂ ಅದಕ್ಕೆ ಧ್ವನಿಗೂಡಿಸಿದರು; "ಜಯ ಜಯಕರುಣಾಬ್ಧೇ ಶ್ರೀ ಮಹಾದೇವ ಶಂಭೋ".

ಜಯ ಜಯಕಾರ ಹಾಕುತ್ತ ಎಲ್ಲರೂ ನಲಿದರು. ಶಿವಜಟಾಜೂಟ ಚಂದ್ರ ಪೂರ್ಣ ಚಂದ್ರನಾಗಿ ಅದನ್ನು ಆಲಿಸುತ್ತ ಹಾಡಿನಲ್ಲೇ ತನ್ಮಯನಾಗಿ ಮಂದಹಾಸ ಬೀರುತಿದ್ದ; ತನ್ನೊಡೆಯನ ಕರುಣಾ ಹೃದಯವನ್ನು ತೆರೆದಿಟ್ಟಿದ್ದ!

# ೭ ಕುರುಡಿಯ ಕಾರಬಾರ

ಶಂಕರ ಮುದುಕನಾಗಿದ್ದರೂ ತನ್ನ ಗದ್ದೆಯಲ್ಲಿ ಅತ್ಯುತ್ಸಾಹದಿಂದ ದುಡಿಯುತಿದ್ದ. ಈ ವರ್ಷ ಸುದೈವದಿಂದ ಮೋಡಗಳು ಉದಾರವಾಗಿ ಆವಶ್ಯಕತೆ ಬಿದ್ದಾಗ ನೀರು ಸುರಿಸಿದ್ದುವು. ಇದರಿಂದ ಬೆಳೆಯೂ ಹುಲುಸಾಗಿ ಕೈಗೆ ಬಂದಿತ್ತು. ಸುಗ್ಗಿಯು ಸಾಗುವಳಿಗಾಗಿ ಆತ ಗದ್ದೆಯನ್ನು ಉಳುತಿದ್ದ. ಎಡಗೈಯಲ್ಲಿ ನೇಗಿಲ ಹಿಡಿ ಹಿಡಿದು, ಬಲಗೈಯಲ್ಲಿ ಆಗಾಗ ಎತ್ತುಗಳ ಬಾಲವನ್ನು ನೇವರಿಸುತ್ತ ಅವುಗಳ ವೇಗವು ಏಕಪ್ರಕಾರವಿರುವಂತೆ ಕೀಲಿ ಕೊಡುತಿದ್ದ. ತಾನು ಎತ್ತುಗಳೊಡನೆ ಮುಂದಕ್ಕೆ ನಡೆಯುತಿದ್ದಂತೆಯೇ ಹತ್ತಿರದಲ್ಲಿಯೇ ನೇಜಿ ನೆಡುತಿದ್ದ ತನ್ನ ಪತ್ನಿ ಪದ್ಮಳ ಕಡೆಗೆ ಅರ್ಥವತ್ತಾದ ನಗುವಿನಿಂದ ಕೂಡಿದ ಮುಖವನ್ನು ತಿರುಗಿಸುತಿದ್ದ. ಆಕೆಯು ಸೆರಗನ್ನು ಸೊಂಟಕ್ಕೆ ಬಿಗಿದು, ಬಟ್ಟೆಯನ್ನು ಮಣಿಗಂಟಿನ ಮೇಲೆ ಎತ್ತಿ ಕಟ್ಟಿ, ನೇಜಿಯ ಸೂಡಿಯನ್ನು ಬಿದಿರಿ, ನಾಲ್ಕೈದು ಭತ್ತದ ಗಿಡಗಳನ್ನು ಪ್ರತ್ಯೇಕಿಸಿ ಉತ್ತು ಹದಮಾಡಿದ ಗದ್ದೆಯ ಭಾಗದಲ್ಲಿ ನಾಟುತಿದ್ದಳು. ಮಣ್ಣಿನ ಮಕ್ಕಳಾದ ಅವರು ತಮ್ಮ ದುಡಿಮೆಯಲ್ಲಿಯೇ ಸ್ವರ್ಗಸುಖ ಕಾಣುತಿದ್ದರು.

ಸ್ವಲ್ಪ ಸಮಯ ಕಳೆಯಿತು. ಇಬ್ಬರ ಪಾದಗಳೂ ಶಿಥಿಲವಾದುವು; ಬಟ್ಟೆ ಬೆವರಿನಿಂದ ತೊಯ್ದು ಹೋಯಿತು. ಕೈಗಳು ತುಸು ಕಂಪಿಸತೊಡಗಿದುವು. ಹೊಟ್ಟೆಯೊಳಗೆ ಹನ್ನೆರಡು ಒನಕೆಗಳ ಬಡಿದಾಟ ಪ್ರಾರಂಭವಾಯಿತು. ಇಬ್ಬರೂ ಅನತಿ ದೂರದಲ್ಲೇ ಇರುವ ತಮ್ಮ ಮನೆಯಿಂದ ಬರುವ ದಾರಿಯನ್ನೇ ಪ್ರತೀಕ್ಷಿಸುತಿದ್ದರು. ಆ ದಾರಿಯಲ್ಲಿ ಯಾರೂ ಬಾರದೆ ಇರುವುದನ್ನು ಕಂಡು, ನಿರಾಶರಾಗಿ ಮರಳಿ ತಮ್ಮ ಕಾರ್ಯದಲ್ಲಿ ತೊಡಗಿದರು. ತುಸು ಹೊತ್ತಾದ ಬಳಿಕ ಪದ್ಮ ನೆಟ್ಟಗೆ ನಿಂತು ನೆಟಿಕೆ ಮುರಿದುಕೊಂಡು ಆಕಾಶದತ್ತ ನೋಡಿ ಹೇಳಿ

ದಳು —"ನೇಸರು ಬಹಳ ಮೇಲಕ್ಕೆ ಬಂತು. ಇನ್ನೂ ಲಲ್ಲಿ ಗಂಜಿಯಾಕೆ ತರಲಿಲ್ಲ?"

ಶಂಕರನು ಧ್ವನಿಗೂಡಿಸಿದ—"ಹೌದು, ಇಷ್ಟು ಹೊತ್ತಿನೊಳಗೆ ಬರಬೇಕಿತ್ತು. ಏನಾಯಿತಿಂದು?"

ಮಗಳ ಕರ್ತವ್ಯ ಪರಾಯಣತೆಯ ಪ್ರಶಂಸೆ ತಾಯಿಂದಿರಿಗೆ ಒಳಗಿಂದೊಳಗೆ ಸಂತೋಷವನ್ನುಂಟು ಮಾಡಿದರೂ ತಮಗಾದ ಪ್ರಸನ್ನತೆಯನ್ನವರೆಂದೂ ಪ್ರಕಟಿಸಲಾರರು. ಎಂತಲೇ ಪದ್ಮ ನುಡಿದಳು—"ಹೌದು, ನಿಮ್ಮ ಮಗಳು ಬಹಳ ಒಳ್ಳೆಯವಳು. ಪಾಪ, ಇಂದು ಬೆಟ್ಟ ನಡುದಾರಿಯಲ್ಲಿ ಬಿದ್ದು ಆಕೆಯ ಬರವನ್ನು ತಡೆದಿರಬೇಕು. ಆದರೆ, ಒಂದು ಮಾತು ತಿಳಿದುಕೊಳ್ಳಿ. ನಿಮ್ಮ ಮಗಳ ಮನಸ್ಸು ಆಟಓಟಗಳಲ್ಲಿ ಹರಿಯುವಷ್ಟು ಕೆಲಸ ಕಾರ್ಯಗಳತ್ತ ಸರಿಯುವುದಿಲ್ಲ. ನನ್ನ ಮಾತನ್ನಂತೂ ನೀವು ಕೇಳುವುದಿಲ್ಲ; ನಾನು ಅದೆಷ್ಟು ಬಾರಿ ನಿಮ್ಮೊಡನೆ ಹೇಳಿದೆ........"

"ಏನೆಂದರೆ, ಆಕೆಯನ್ನು ಗದರಿಸುತ್ತೇನೆ; ಬೆದರಿಸುತ್ತೇನೆ. ಹೊಡೆಯುತ್ತೇನೆ ಎಂದು ಅಲ್ಲವೆ? ಆಕೆಯ ಪ್ರಾಯವನ್ನಾದರೂ ಗಮನಿಸು. ಇದೇನು ಆಕೆಯು ಆಡುತ್ತಿರಬೇಕಾದ ಸಮಯವಲ್ಲವೆ? ನಿಜ ನುಡಿಯುವುದಾದರೆ, ಅವಳು ರಾಣಿಯಾಗುವ ಯೋಗ್ಯತೆಯಿದ್ದವಳು. ಪಾಪ, ಒಬ್ಬ ಬಡ ರೈತನ ಮಗಳಾಗಿ ಹುಟ್ಟಿ ಆ ಯೋಗ್ಯತೆಯನ್ನೇ ಕಳೆದುಕೊಂಡಳು."

"ಸಾಕು, ಸಾಕು, ಕುಶಾಲು ಮಾಡಬೇಡಿ. ಆಕೆ ರಾಣಿಯಲ್ಲ ಮಹಾರಾಣಿಯಾಗತಕ್ಕವಳು; ನನ್ನ ಮಾತನ್ನಂತೂ ಆಕೆ ಗಮನಿಸುವುದಿಲ್ಲ; ಇನ್ನು ನಿಮ್ಮ ಹೊಗಳಿಕೆಯಿಂದ ಗಾಳಿ ತುಂಬಿದ ಪುಗ್ಗೆಯಂತಾಗಿ ಬಿಡುತ್ತಾಳೆ."

ಶಂಕರ ಏನನ್ನೂ ಇದಕ್ಕೆ ಪ್ರತ್ಯುತ್ತರವೆಂದು ಹೇಳಲಿಲ್ಲ. ಪದ್ಮಳಾದರೂ ಒಮ್ಮೆ ದಾರಿಯ ಉದ್ದಕ್ಕೆ ನೋಟ ಹಾಯಿಸಿ, "ಮನೆಗೆ ಹೋಗಿ ನೋಡಿ ಬರುತ್ತೇನೆ; ನಿಮ್ಮ ರಾಣಿಯಾಗುವ ಹುಡುಗಿ ಎಲ್ಲಿ ದೂಳಾಟ ಆಡ ಹೊರಟಿದೆಯೆಂದು" ಎಂದು ಗದ್ದೆಯಿಂದ ಮೇಲೆ ಬಂದು,

ಆ ಕೆಸರು ನೀರಲ್ಲೇ ಕೈಕಾಲು ತೊಳೆವ ಶಾಸ್ತ್ರ ಮುಗಿಸಿ ಮನೆಯ ಮಾರ್ಗ ಹಿಡಿದಳು. ಶಂಕರ ಹಿಂದಿನಿಂದ ಕೂಗಿ ಹೇಳಿದ–"ಪದ್ಮೂ ಇನ್ನು ಆಕೆಯ ಮೇಲೆ ಕೈಯೆತ್ತಬೇಡ, ಮತ್ತೆ."

"ಕೈಯೇಕೆಯೆತ್ತಬೇಕು? ರಾಣಿಯ ಕಾಲು ಹಿಡಿದು ಪೂಜೆ ಮಾಡುತ್ತೇನೆ" ಆವೇಶಪೂರ್ವಕವಾಗಿ ಹೇಳುತ್ತ ಹಿಂದೂ ನೋಡದೆ ಆಕೆ ಮುಂದುವರಿದಳು. ಶಂಕರ ಅಲ್ಲೇ ಗದ್ದೆಯ ನಡುವಲ್ಲಿ ನಿಂತವನು ನಿಂತುಕೊಂಡೇ ಉಳಿದ.

ಪದ್ಮಾ ಲಗುಬಗೆಯಿಂದ ಗುಡಿಸಲ ಬಳಿ ಬಂದಾಗ, ಬಾಗಿಲು ಹಾಕಿರದುದನ್ನು ಕಂಡು ಮಗಳು ಮನೆಯಲ್ಲೇ ಇರುವಳೆಂದು ಊಹಿಸಿದಳು. "ಲಲ್ಲಿ, ಸತ್ತು ಹೋದೆಯೇನು? ಏತಕ್ಕೆ ಗಂಜಿತರಲಿಲ್ಲ? ಮಾತಾಡುವುದಿಲ್ಲವೇಕೆ?" ಗದರಿಕೆಯ ದನಿಯಲ್ಲಿ ಕೇಳಿದಳು. ಒಳಗಣಿಂದ ಯಾವುದೇ ಉತ್ತರ ಬಾರದಿರಲು ಪದ್ಮ ಅಧೀರಳಾದಳು. ಒಳಹೊಕ್ಕು ನೋಡಿದಳು. ಲಲ್ಲಿ ಬಿಡಿಸಿದ ಚಾಪೆಯಲ್ಲಿ ಒರಗಿದ್ದಳು; ಕಣ್ಣುಗಳನ್ನು ತೆರೆದೂ ಇದ್ದಳು. ಪದ್ಮಾ ಮಗಳ ಹಣೆಗೆ ಕೈಯಿಕ್ಕಿ ನೋಡಿದಳು—ಕಾವಲಿಯಂತದು ಕಾಯುತಿತ್ತು! ಕಟ್ಟಿಕೊಂಡಿದ್ದ ತುಂಬಿದ ಸಿಟ್ಟು ಅಲ್ಲಿಯೇ ಆರಿ ಹೋಯಿತು. ಆಕೆಯು ಅಲ್ಲಿಯೇ ಕುಸಿದು ಕುಳಿತಳು. ತನ್ನ ಏಕಮಾತ್ರ ಪುತ್ರಿ ಲಲಿತೆಯು ಜ್ವರದಿಂದ ನರಳುತಿದ್ದಳು. ತುಸು ಧೈರ್ಯತಂದುಕೊಂಡು, ಅಂಗಾಂಗಗಳಲ್ಲಿ ಕೈಸವರಿದಾಗ, ಲಲ್ಲಿಗೆ ಜ್ವರ ಮಾತ್ರ ಬಂದುದಲ್ಲ, ಮೈಯಲ್ಲಿ ಮೈಲಿಗೆಯ ಚಿಕ್ಕಪುಟ್ಟ ಗುಳ್ಳೆಗಳೂ ಎದ್ದಿರುವುದು ಕಂಡು ಬಂತು. ಮಲಗಿದ್ದ ಲಲ್ಲಿಯ ಕಣ್ಣುಗಳು ಕೆಂಪಾಗಿದ್ದುವು; ಅವುಗಳಲ್ಲಿ ನೀರು ತುಂಬಿ ಬಂದಿತ್ತು. ಆಕೆಯ ತುಟಿಗಳು ಕಂಪಿಸುತಿದ್ದುವು. ಆದರೂ ಪ್ರಯತ್ನ ಪೂರ್ವಕವಾಗಿ ಹೇಳಿದುವು: "ನನ್ನನ್ನು ಕ್ಷಮಿಸಮ್ಮಾ. ಇಂದು ನನ್ನಿಂದಾಗಿ ನೀನು ಮತ್ತು ಅಪ್ಪ ಉಪವಾಸ ಬೀಳಬೇಕಾಯಿತು."

"ಅಯ್ಯೋ ಮಗು, ನಿನ್ನಿಂದೇನಾಯಿತು? ಮೈಲಿಗೆ ಅಂಟಿದೆ; ಕೆಲವು ದಿನ ಆಡ್ಯಾಡಬೇಡ ಹ್ಞಾಂ"–ತಾಯಿಯು ಸ್ನೇಹಭರಿತ ದೃಷ್ಟಿಯಿಂದ ಮಗಳನ್ನು ನೋಡುತ್ತ ಆಕೆಯ ಕಣ್ಣೀರನ್ನು ಒರಸಿದಳು.

"ಅಮ್ಮಾ......." ಲಲ್ಲಿಯು ಮೆತ್ತಗೆ ಕರೆದಳು.

"ಏನು ಮಗೂ......?"

"ದಾಕು ಹಾಕಿಸಿಕೊಂಡವರಿಗೂ ವೈಲಿಗೆ ಅಂಟುವುದೆ?"

"ನಾನು ಹೇಗೆ ಹೇಳಲಿ? ಇದು ಪ್ರಕೃತಿಯ ಕೋಪ. ಎಲ್ಲರೂ ಸಹಿಸಿಕೊಳ್ಳಬೇಕಾಗಿದೆ."

"ನಾನಿದನ್ನು ಒಪ್ಪಲಾರೆ. ಮನುಷ್ಯನು ವೈಜ್ಞಾನಿಕ ಸಹಾಯದಿಂದ ಪ್ರಕೃತಿಯ ಬಹಳಷ್ಟು ಕೋಪತಾಪಗಳನ್ನು ಗೆದ್ದಿದ್ದಾನೆ. ಅಜ್ಞಾನ ಮತ್ತು ಅಂಧ ವಿಶ್ವಾಸದ ಕೋಪ ಇಲ್ಲವೇ ಪರಿಣಾಮವಿದು, ಅಮ್ಮಾ."

ಲಲ್ಲಿಯ ಮೆದುಳಿಗೆ ಇಂತಹ ಜ್ಞಾನ ಹೇಗೆ ಹೊಕ್ಕಿತು ಎಂದು ಪದ್ಮ ತಿಳಿದಿರಲಿಲ್ಲ. ಇದನ್ನು ತಿಳಿಯುವ ಕುತೂಹಲದಿಂದ ಕೇಳಿದಳು- "ಇದೆಲ್ಲವನ್ನೂ ನೀನು ಎಲ್ಲಿಂದ ಅರಿತುಕೊಂಡು ಬಂದೆ?"

"ಮೋಹನನು ಎಲ್ಲವನ್ನು ಹೇಳಿದ. ಅವನ ಮನೆಯಲ್ಲಿ ಯಾರಿಗೂ ಸಿಡುಬು ಅಂಟಲಿಲ್ಲ. ಇದಕ್ಕೆ ದಾಕು ಹಾಕಿಸಿಕೊಂಡುದೇ ಕಾರಣ. ಯಾರು ದಾಕು ಹಾಕಿಸಿಕೊಳ್ಳಲಿಲ್ಲವೋ ಅವರು ರೋಗಕ್ಕೆ ಬಲಿಯಾಗಿ, ಅದರ ಫಲವನ್ನು ಅನುಭವಿಸುತ್ತಿರುತ್ತಾರೆ."

ಪದ್ಮ ಕಣ್ಣುಗಳನ್ನು ಅಗಲಿಸಿ ಲಲಿತೆಯ ಮುಖವನ್ನೇ ನೋಡತೊಡಗಿದಳು. ಆಕೆಯ ವದನಾರವಿಂದವು ಜ್ವರದಿಂದಾಗಿ ವಿಹ್ವಲಿತವಾಗಿದ್ದರೂ ಒಂದು ಅಜ್ಞಾತ ಗಂಭೀರ ಭಾವದಿಂದ ಕೂಡಿತ್ತು. "ನಿನ್ನ ಮತ್ತು ತಂದೆಯವರ ಹಠದಿಂದಾಗಿಯೇ ನನಗೀ ಕಷ್ಟವನ್ನು ಅನುಭವಿಸಬೇಕಾಯಿತು. ನಾನು ಗುಣಮುಖಳಾದೊಡನೆಯೇ ದಾಕು ಹಾಕಿಸಿಕೊಳ್ಳುತ್ತೇನೆ" ಎಂದು ಲಲ್ಲಿ ಸಮ್ಮತಿಗಾಗಿ ತಾಯತ್ತ ಹೊರಳಿದಳು.

"ಸರಿಯಮ್ಮಾ, ಹಾಗೆಯೇ ಮಾಡು. ಈಗ ಮಲಗಿರು" ಎಂದು ಪದ್ಮಾ ಎದ್ದಳು; ಮನೆಯ ಹೊರಗಡೆ ಬಂದಳು. ಆಕೆಯ ಹೃದಯವಾದರೂ ಧಗಧಗವೆನ್ನುತಿತ್ತು. ಲಲ್ಲಿಯ ಮಾತಿನಲ್ಲಿ ಸ್ವಲ್ಪವಾದರೂ ಸತ್ಯಾಂಶವಿದೆಯೆಂದಾಕೆಗೆ ಅರಿವಾಯ್ತು, ಒಂದು ವಿಧದ ಕೈದಿಯಂತೆ ಆಕೆ ಮೆತ್ತಗೆ ಸುಳಿದು ಗದ್ದೆಯ ಬದಿಗೆ ಸಾಗಿದಳು.

ಕೆಲವು ದಿನಗಳ ತರುವಾಯ ವೈಲಿಗೆಯು ಗ್ರಾಮದ ಕೆಲವಾರು ಜನರನ್ನು ಬಲಿ ತೆಗೆದುಕೊಂಡಿತು. ಅಲ್ಲದೆ, ತನ್ನ ಕಾಟಕ್ಕೆ ಗುರಿಯಾದವರ ಮುಖ ಮತ್ತು ಶರೀರಗಳಲ್ಲಿ ತನ್ನ ಆಗಮನದ ಮುದ್ರೆಯನ್ನು ಬಹುವಾಗಿ ಒತ್ತಿತ್ತು. ಲಲಿತೆಯ ಶರೀರದಲ್ಲೂ ವೈಲಿಗೆಯ ಕಲೆಗಳು ಉಳಿದುಕೊಂಡುವಲ್ಲದೆ ಆಕೆಯ ಎರಡೂ ಕಣ್ಣುಗಳು ಕೆಡುತ್ತ ಬಂದುವು. ಅವುಗಳಲ್ಲಿ ಮೂಡಿದ್ದ ವೈಲಿಗೆಯ ಗುಳ್ಳೆಗಳು ತಮ್ಮೊಡನೆ ದೃಷ್ಟಿ ಶಕ್ತಿಯನ್ನೂ ಕೊಂಡು ಹೋದುವು. ಇದನ್ನು ತಿಳಿದ ಶಂಕರ—ಪದ್ಮರು ಗೋಗರೆದು ಅತ್ತು ಬಿಟ್ಟರು. ಯಾರಾದರೂ ಬಂದವರತ್ತ ತರ್ಜನಿ ಮಾಡಿ 'ಯಾರಿವರು' ಎಂದು ಅವರು ಪ್ರಶ್ನಿಸಿದಾಗ, ಲಲ್ಲಿ ಹೇಳುತಿದ್ದಳು—'ನನಗಾರೂ ತೋರುತ್ತಿಲ್ಲ'ವೆಂದು. ಲಲ್ಲಿ ಕುರುಡಿಯಾದಳು ಎಂದವರಿಗೆ ವಿಶ್ವಾಸ ಹುಟ್ಟಿತು, ಇದರಿಂದ ನೊಂದರು; ಅತ್ತರು. ಆಕೆ ಗಂಡಾದರೂ ಆಗಿರುತಿದ್ದರೆ, ಒಂದು ರೀತಿಯಾಗುತಿತ್ತು; ಆದರೆ, ಹುಡುಗಿಯ ಪರ್ವತಾಕಾರದ ಜೀವನವು ಕಣ್ಣುಗಳಿಲ್ಲದೆ ಹೇಗೆ ಸಾಗೀತು? ಈ ಬಗ್ಗೆ ಯೋಚಿಸುತಿದ್ದಂತೆ ಅವರ ಹೃದಯವೂ ಒಡೆಯುವಂತಿತ್ತು.

ಲಲ್ಲಿ ಮತ್ತಾಕೆಯ ತಾಯ್ತಂದೆಯರಕಡೆಗೆ ಹಳ್ಳಿಯ ಎಲ್ಲ ಜನರ ಸಹಾನುಭೂತಿಯಿತ್ತು. ಆದರೆ, ಕೇವಲ ಸಹಾನುತಾಪದಿಂದೇನಾಗುವುದು? ನಗರದತ್ತಣಿಂದ ಬಂದವರು 'ನಿರಾಶರಾಗಬೇಡಿ, ಆಸ್ಪತ್ರೆಯಲ್ಲಿ ಡಾಕ್ಟರರಿಗೆ ತೋರಿಸಿರಿ. ಸರಿಯಾದರೂ ಆಗಬಹುದು' ಎಂದು ಧೈರ್ಯ ತುಂಬ ತೊಡಗಿದರು.

ಶಂಕರ ಇದನ್ನೂ ಮಾಡಿದ. ಆದರೆ, ಅಲ್ಲಿಂದ ಭಗ್ನ ಮನೋರಥರಾಗಿಯೇ ತಂದೆ ಮಗಳು ಹಿಂದಿರುಗಬೇಕಾಯಿತು. ಜನರ ಮಾತನ್ನು ಕೇಳಿ, ಹಲವಾರು ಪಂಡಿತರು, ಹಕೀಮರು ಎಲ್ಲರನ್ನೂ ಕಂಡಾಯಿತು; ಆದರೆ, ಎಲ್ಲವೂ ನಿಷ್ಫಲವೆನಿಸಿದಾಗ, ಆ ಜೀವ ಈ ಶಾಪವನ್ನು ಅನುಭವಿಸಲೇಬೇಕೆಂದು ಅವರು ತಿಳಿದು ಖಿನ್ನರಾದರು.

ಶಂಕರ—ಪದ್ಮರಂತೆ ಲಲ್ಲಿ ಮಾತ್ರ ಹತಾಶಳಾಗಲಿಲ್ಲ. ದೃಷ್ಟಿಯೇನೋ ಹೋಯಿತು; ಆದರೆ, ಬುದ್ಧಿ ಮತ್ತು ಕಾರ್ಯಶಕ್ತಿ ಉಳಿದಿದೆಯಲ್ಲಾ ಎಂದವಳು ಯೋಚಿಸುತಿದ್ದಳು—ಮನೆಯ ಚಿಕ್ಕ ಪುಟ್ಟ ಕೆಲಸ

ಗಳಲ್ಲಿ ಆಕೆ ತೊಡಗುವ ಪ್ರಯತ್ನ ಮಾಡಿದಳು. ಆದರೆ, ಕೆಲಸದ ನಡುವೆ ಮಣ್ಣಿನ ಮಡಿಕೆಗಳು ಒಡೆಯುತ್ತಿದ್ದುವು; ಕೆಲವೊಮ್ಮೆ ಅಲ್ಲಿಯೇ ಯಾವುದೋ ವಸ್ತುಗಳನ್ನು ಮೆಟ್ಟಿ ಎಡವಿ ಬೀಳುತ್ತಿದ್ದಳು; ಗೋಡೆ-ಬಾಗಿಲುಗಳಿಗೆ ಡಿಕ್ಕಿ ಹೊಡೆಯುತ್ತಿದ್ದಳು. ಇದನ್ನು ಕಂಡ ತಾಯಿ, "ಮಗೂ, ನೀನು ಹೇಳಿದ ಮಾತನ್ನು ಕೇಳುವುದಿಲ್ಲ. ಕುರುಡಿಯಿಂದ ಏನು ತಾನೇ ಕೆಲಸವಾಗಬಹುದು? ಸುಮ್ಮನೆ ವಸ್ತುಗಳನ್ನು ಒಡೆದು ಹಾಕುತ್ತಿ. ಜೀವಕ್ಕೇನೇ ಗಂಡಾಂತರ ತಂದುಕೊಳ್ಳುತ್ತಿ. ಒಂದು ಮೂಲೆಯಲ್ಲಿ ಸುಮ್ಮನೆ ಕುಳಿತರಾಗದೆ?" ಎಂದು ಮೆತ್ತಗಾಗಿ ಗದರಿಸುತ್ತಿದ್ದಳು.

ಆಗ ಮಗಳನ್ನುತ್ತಿದ್ದಳು—"ಅಮ್ಮಾ, ಏನೋ ಚೂರು ಪಾರು ನಷ್ಟವಾಗುವುದೆಂದು ನೀನು ಹೆದರಿದರೆ, ನಾನು ಕೆಲಸ ಮಾಡುವುದನ್ನು ಕಲಿಯುವುದಾದರೂ ಹೇಗೆ?"

"ಕಲಿಯುತ್ತಿ ನೀನು, ನಿನ್ನ ತಲೆ! ದೊಡ್ಡ ಕಾರಖಾನೆ ನಡೆಸುತ್ತಿಯಲ್ಲ? ಕಣ್ಣುಗಳೇ ಇಲ್ಲದೆ ಹೋದರೆ, ಕಲಿಯುವುದಾದರೂ ಏನನ್ನು? ಮಾಡುವುದಾದರೂ ಏನನ್ನು?"

ಲಲಿತೆ ಸುಮ್ಮನಾಗುತ್ತಿದ್ದಳು. ಕುರುಡಿಯಾಗಿದ್ದೂ ಕಲಿಯುವ, ಮಾಡುವ ತನ್ನ ಆಸೆಯನ್ನು ಆಕೆ ತಾಯಿಗೆ ಹೇಗೆ ತಿಳಿಸಬಲ್ಲಳು? ಆದರೂ ಯಾರಿಂದಲಾದರೂ ಸೋಲೊಪ್ಪಿಕೊಳ್ಳುವ ಹುಡುಗಿ ಆಕೆಯಾಗಿರಲಿಲ್ಲ.

ಒಂದು ದಿನ ಶಂಕರ—ಪದ್ಮರು ಗದ್ದೆಯಲ್ಲಿ ಕೆಲಸ ಮಾಡುತ್ತ ಇರುವಾಗ ಮಾತಾಡಿಕೊಳ್ಳುತ್ತಿದ್ದರು. ಪದ್ಮ ಹೇಳುತ್ತಿದ್ದಳು— "ಅಲ್ಲ, ನಮ್ಮ ನಂತರ ಲಲ್ಲಿಯು ಹೇಗೆ ಬದುಕಬಲ್ಲಳೆಂಬುದೇ ನನಗೆ ಹೆದರಿಕೆ. ಆಕೆಯನ್ನು ಸಾಕುವವರಾದರೂ ಯಾರು?"

ಅಷ್ಟರಲ್ಲಿ ಒಂದು ಸ್ವರ ಕಿವಿಗೆ ಬಿತ್ತು—"ಹೆದರುವ ಅಗತ್ಯವಿಲ್ಲ. ನನ್ನನ್ನು ನಾನೇ ನೋಡಿಕೊಳ್ಳುತ್ತೇನೆ ನಿಮ್ಮ ಆಶೀರ್ವಾದ ಒಂದಿದ್ದರೆ ಸಾಕು."

ಇಬ್ಬರೂ ತಲೆಯೆತ್ತಿ ಅಕ್ಕಪಕ್ಕ ನೋಡತೊಡಗಿದರು. ತುಸು ದೂರದಲ್ಲಿಯೇ ಕೈಯಲ್ಲಿ ದಂಟಿಯೂರಿ ಲಲ್ಲಿ ಅವರತ್ತಲೇ ಬರುತ್ತಿದ್ದಳು.

ಇಬ್ಬರೂ ತಮ್ಮ ಕಣ್ಣುಗಳನ್ನು ನಂಬಲಿಲ್ಲ. ಪದ್ಮ ಗಾಬರಿಗೊಂಡು ಕೇಳಿದಳು— "ಏ, ನೀನು ಬಂದೆಯೂ ವರೂ ಯಾರೊಡನೆ?"

"ಇವರ ಸಂಗಡ. ಇದುವೇ ನನ್ನ ಪಥ ಪ್ರದರ್ಶಕ. ನೀವು ಗದ್ದೆಯತ್ತ ಹೋದ ಬಳಿಕ ಇದರ ಸಹಾಯದಿಂದ ಇಡಿಯ ಹಳ್ಳಿಯನ್ನೆ ಸುತ್ತುತ್ತೇನೆ. ಎಲ್ಲ ದಾರಿಗಳೂ ಎಲ್ಲರ ಮನೆಗಳೂ ನನಗೆ ಸರಿಯಾಗಿ ಗೊತ್ತು. ನಿಮಗೆ ಮಾತ್ರ ನಾನು ಹೇಳಿರಲಿಲ್ಲ. ಬೇಕಾದರೆ ಒಂದು ಬಾರಿ ಪರೀಕ್ಷೆಮಾಡಿ ನೋಡಿ" ಎಂದು ಲಲ್ಲಿ ತನ್ನ ಕೈಯ ದಂಟಿಯನ್ನೊಮ್ಮೆ ನೆಲಕ್ಕೆ ಬಲವಾಗಿ ಊರಿದಳು.

ಶಂಕರನ ಮುಖ ಪ್ರಸನ್ನವಾಯಿತು; ಆದರೆ, ತಾಯಿಯದು ಮಾತ್ರ ಮಲಿನವಾಯಿತು. ಕಂಪಿಸುವ ಧ್ವನಿಯಲ್ಲಿ ಆಕೆಯೆಂದಳು— "ನಾನು ನಿನ್ನೊಡನೆ ಚರ್ಚೆ ನಡೆಸ ಬಯಸುವುದಿಲ್ಲ. ನನ್ನ ಮಾತನ್ನು ನೀನು ಕೇಳುವವಳೂ ಅಲ್ಲ. ಈಗಲಾದರೂ ನೀನು ಕೇಳುವಿಯೆಂಬ ಭರವಸೆಯೂ ನನಗಿಲ್ಲ. ಆದರೆ, ನೀನು ಹೀಗೆಲ್ಲಾ ಮನೆಯಿಂದ ಹೊರಗೆ ಬರುವುದು ಎಷ್ಟೆಂದರೂ ಒಳ್ಳೆಯದಲ್ಲ. ಎಲ್ಲಾದರೂ ಹಳ್ಳಿ-ಪಳ್ಳಿಗಳಿಗೋ ತೋಡು ಗೀಡುಗಳಿಗೋ ಬಿದ್ದರೆ, ಅಥವಾ ಎತ್ತು ಕೋಣಗಳ ಕೊಂಬಿಗೆ ಎದುರಾದರೆ, ನಿನ್ನೊಡನೆ ನಾವೂ ಬವಣೆ ಅನುಭವಿಸಬೇಕಾಗುವುದು. ಮದ್ದು ಗಿದ್ದು ಮಾಡಲು ಹಣವಾದರೂ ನಮ್ಮ ಹತ್ತಿರವಿಲ್ಲ."

ತಾಯಿಯ ಮಾತಿನಿಂದ ಮಗಳ ಮುಖದ ತೇಜವೇ ಕುಂದಿ ಹೋದುದನ್ನು ಗಮನಿಸಿದ ಶಂಕರನು ನಡುವೆ ಬಾಯಿ ಹಾಕಿದ. "ಇರಲಿ, ಲಲ್ಲಿ, ನೀನು ಇಲ್ಲಿಗೆ ಬಂದುದಾದರೂ ಏಕೆ?"

"ನಿನ್ನೊಡನೆ ಒಂದು ಮಾತು ಹೇಳಲೇ ಅಪ್ಪಾ?"

"ನನ್ನೊಡನೆಯೆ? ಅದೇನಪ್ಪಾ? ಸಂಜೆ ಮನೆಯಲ್ಲೇ ಹೇಳಿದರೆ, ಆಗುತಿದ್ದಿಲ್ಲವೆ?" ವಿಸ್ಮಯಗೊಂಡ ಶಂಕರ ಕೇಳಿದ.

ಲಲಿತೆ ದೃಢವಾಗಿ ಹೇಳಿದಳು— "ಇಲ್ಲಿಗೇನೆ ಬಂದು ನಾನು ನನ್ನ ಆಶಯವನ್ನು ತಿಳಿಸಲು ಬಯಸಿದೆ."

"ಅದೆಲ್ಲ ಏತಕ್ಕೆ? ಇಲ್ಲಿ ನಿನಗೆ ಕೆಲಸವಾದರೂ ಏನು?" ತಾಯಿಯ ಪ್ರಶ್ನೆಯಿದು.

"ಕೆಲಸವಿದೆಯಮ್ಮಾ, ಮನೆಯಲ್ಲಿ ಒಬ್ಬಳೇ ನಿರುದ್ಯೋಗಿಯಾಗಿ ಕುಳಿತು ಸಾಕಾಗಿ ಹೋಯಿತು. ನೀವು ಗಂಜಿ ಬೇಯಿಸಿಟ್ಟು ಗದ್ದೆಗೆ ಬನ್ನಿ; ನಾನದನ್ನು ಸಮಯಕ್ಕೆ ಸರಿಯಾಗಿ ಇಲ್ಲಿಗೆ ತಂದು ಮುಟ್ಟಿಸುವೆ. ಇದರಿಂದ ನಿಮ್ಮೊಡನೆ ಮಾತಾಡುವ ಸಂದರ್ಭವೂ ಬರುವುದು; ತಿರುಗಾಡುವುದರಿಂದ, ನನ್ನ ಮನಸ್ಸೂ ತುಸು ಹಗುರಾಗುವುದು"

ಪದ್ಮಳಿಗೆ ಈ ಮಾತು ಅರ್ಥವೇ ಆಗಲಿಲ್ಲ. ಆದರೂ ಮಾತು ಹಾರಿಸಲು ಆಕೆ, "ಒಳ್ಳೆಯದು;ನೋಡುವ; ಈಗ ಮನೆಗೆ ಹೋಗು"ಎಂದಳು.

ಏನನ್ನೂ ನುಡಿಯದೆ ಲಲ್ಲಿ ಮನೆಯತ್ತ ತಿರುಗಿದಳು. ದಂಟಿಯೂರುತ್ತ ಊರುತ್ತ ಆಕೆ ದಾರಿ ಹಿಡಿದಳು. ಅಲ್ಪ ಸಮಯದ ವರೆಗೆ ಶಂಕರ ಮತ್ತು ಪದ್ಮ ಆಶ್ಚರ್ಯ ಮತ್ತು ಆಹ್ಲಾದಗಳಿಂದ ಆಕೆಯು ಹೋಗುತ್ತಿರುವುದನ್ನೇ ನೋಡ ತೊಡಗಿದರು; ಆಕೆ ದೃಷ್ಟಿಯಿಂದ ಮರೆಯಾದ ಬಳಿಕ, ತಮ್ಮ ಕೆಲಸದಲ್ಲಿ ತೊಡಗಿದರು.

ಅಂದಿನಿಂದ ಲಲ್ಲಿ ಹಿಂದಿನಂತೆಯೇ ಮಧ್ಯಾಹ್ನ ಗಂಜಿಯನ್ನು ಹಿಡಿದುಕೊಂಡು ಗದ್ದೆಗೆ ಬರ ತೊಡಗಿದಳು. ಆಕೆಯ ಕುರುಡುತನದಿಂದ ಯಾವ ತೊಂದರೆಯೂ ಆಗಲಿಲ್ಲ. ಕಾಲಕ್ರಮದಲ್ಲಿ ಆಕೆ ಮನೆಗೆಲಸದಲ್ಲಿಯೂ ತಾಯಿಗೆ ನೆರವಾಗತೊಡಗಿದಳು. ಒಂದು ದಿನ ಸಂಜೆ ಆಕೆ ರಾತ್ರೆಯ ಅಡಿಗೆಯನ್ನು ಮುಗಿಸಿ ಒಲೆ ನಂದಿಸಿದ್ದಳು. ಇದನ್ನು ತಿಳಿದ ಪದ್ಮ ಮಗಳ ಕೈಗಳನ್ನು ಮುತ್ತಿಟ್ಟಳು. ಆ ಕೈಗಳಲ್ಲಿ ಅಲ್ಲಲ್ಲಿ ಬೆಂಕಿ ತಗಲಿ ಬೊಕ್ಕೆಗಳೆದ್ದಿದ್ದುವು, ಸಜಲನೇತ್ರಗಳಿಂದ ಆಕೆ ಮಗಳನ್ನು ಅಪ್ಪಿ ಚುಂಬಿಸಿದಳು ಮತ್ತು ಹೇಳಿದಳು—"ಹೀಗೆಲ್ಲಾ ಮಾಡುವುದು ಸರಿಯಲ್ಲ ಮಗೂ. ಎಲ್ಲಾದರೂ ಬಟ್ಟೆಗೆ ಬೆಂಕಿ ತಾಗಿದರೆ....?"

ತಾಯಿಯ ಸ್ವರದಲ್ಲಿ ಪ್ರೇಮಲ ಭಾವನೆಯಿದ್ದುದು ಲಲ್ಲಿಗೆ ಅನುಭವಕ್ಕೆ ಬಂತು. ಆದುದರಿಂದಲೇ ಆಕೆಯೇನೂ ಹೇಳಲಿಲ್ಲ; ತಾಯಿಯ ಕುತ್ತಿಗೆಗೆ ಜೋತುಬಿದ್ದಳು. ಇಬ್ಬರ ಕಣ್ಣುಗಳಲ್ಲೂ ಪ್ರಸನ್ನತೆಯ ಬಾಷ್ಪವಾರಿ ಬಿಂದುಗಳು ಉಕ್ಕಿ ಬರುತ್ತಿದ್ದುವು.

ಒಂದು ದಿನ ನಗರದಲ್ಲಿ ಕಲಿಯಲು ಹೋಗಿದ್ದ ಮೋಹನ ಲಲ್ಲಿಯ ಮನೆಗೆ ಬಂದ. ಆ ಮಾತು ಈ ಮಾತು ಆಡುವಾಗ, ಅಲ್ಲಿ ಕುರುಡರಿಗೆ ವಿದ್ಯಾಭ್ಯಾಸ ನೀಡುವ ಶಾಲೆಯೊಂದಿದೆಯೆಂದು ಹೇಳಿದ. ಇದನ್ನು ತಿಳಿದ ಲಲ್ಲಿ ತಾನೂ ಅಲ್ಲಿ ಕಲಿಯುವೆನೆಂದು ಹಠ ಹಿಡಿದಳು ತಾಯ್ತಂದೆಯರು ಮೊದಮೊದಲು ಇದರತ್ತ ಗಮನ ಹರಿಸಲಿಲ್ಲ. ಅವರು ಇದನ್ನು ನಂಬುವುದಕ್ಕೂ ಸಿದ್ಧರಿರಲಿಲ್ಲ. ಆದರೆ, ಲಲ್ಲಿ ತನ್ನ ಆಸೆ ಈಡೇರಿಸಲು ಅನ್ನಾಹಾರ ಸೇವನೆಯನ್ನೂ ಬಿಡತೊಡಗಿದುದರಿಂದ, ಅಸಹಾಯಕರಾಗಿ ಒಪ್ಪಲೇ ಬೇಕಾಯಿತು.

ಲಲಿತೆ ಮನೆಯಲ್ಲಿಲ್ಲದ್ದಾಗ, ಅವರಿಗೆ ಆಕೆಯದೇ ನೆನಪು ಬರುತಿತ್ತು, ಆಕೆಯದೇ ಚಿಂತೆಯೂ ಇರುತಿತ್ತು. ಆದರೂ ಏನೋ ತುಸು ಕಲಿತನಂತರ ಆಕೆಯ ಜೀವನ ಉತ್ತಮಗೊಂಡೀತೆಂದು ಅವರು ಊಹಿಸುತಿದ್ದರು. ಆಗಾಗ ಅವಳ ಶಾಲೆಯಿಂದ ಪತ್ರ ಬರುತಿತ್ತು: ಅದರಲ್ಲಿ "ನಿಮ್ಮ ಮಗಳು ಬಹಳ ಪ್ರತಿಭಾಶಾಲಿನಿ; ಬಹಳ ಬೇಗನೆ ಓದುಬರಹ ಹಾಗೂ ಕಸಬುಗಳನ್ನು ಕಲಿಯುತಿದ್ದಾಳೆ" ಎಂದು ಓದುವಾಗ, ಅವರು ಸ್ವರ್ಗ ಸುಖಾನುಭವ ಪಡೆಯುತಿದ್ದರು.

ಐದು ವರ್ಷಗಳ ನಂತರ ಲಲಿತೆ ಮನೆಗೆ ಮರಳಿದಾಗ ಯುವತಿಯಾಗಿದ್ದಳು. ಬೆತ್ತ ಬಿದಿರುಗಳಿಂದ ಬುಟ್ಟಿಗಳನ್ನೂ ಪೆಟ್ಟಿಗೆಗಳನ್ನೂ ಹೆಣೆಯುತಿದ್ದಳು. ಹತ್ತಿಯಿಂದ ನೂಲುತಿದ್ದಳು. ಉಣ್ಣೆಯಿಂದ ಸ್ವೆಟ್ಟರ್ ಮೊದಲಾದುವನ್ನು ನೇಯುತಿದ್ದಳು. ಕುರುಡರ ಉಬ್ಬಿದ ಬೆಲ್‌ಲಿಪಿಯಲ್ಲಿ ಸಾಮಾನ್ಯ ರೂಪದಿಂದ ಬರೆಯುತಿದ್ದಳು. ಓದುತಿದ್ದಳು ಹಸ್ತಾಕ್ಷರ ಹಾಕುತಿದ್ದಳು. ಹೀಗೆ ಇಡಿಯ ಗ್ರಾಮದಲ್ಲಿ ಆಕೆಯೊಬ್ಬಳೇ ಓದುಬರಹ ಬಲ್ಲ ಉದ್ಯೋಗ ಮಾಡಬಲ್ಲ ಮಹಿಳೆಯಾದಳು.

ಲಲಿತೆಯ ಮುಂದೆ ತನ್ನ ಹೊಟ್ಟೆ ಹೊರೆಯುವ ಸಮಸ್ಯೆ ಮಾತ್ರವಿರಲಿಲ್ಲ. ಆದುದರಿಂದ, ಆಕೆ ಸಹಕಾರಿ ಸಮಿತಿಯ ಬೋರ್ಡಿನಿಂದ ಆರ್ಥಿಕ ಸಹಕಾರ ಪಡೆದು ಒಂದು ಸಹಕಾರಿ ಉದ್ಯೋಗ ಶಾಲೆಯನ್ನು ಸ್ಥಾಪಿಸಿದಳು. ಅಲ್ಲಿ ಹಳ್ಳಿಯ ರೈತರೂ ಹೆಂಗಸರೂ ಬಿಡುಸಮಯ

ದಲ್ಲಿ ಬಂದು ಕೆಲಸ ಮಾಡುತಿದ್ದರು. ಆಸುಪಾಸಿನ ಮೂಕರು, ಕಿವುಡರು, ಕುರುಡರು ಮೊದಲಾದವರು ಬಂದು ಕೆಲಸ ಮಾಡತೊಡಗಿದರು. ಲಲಿತೆಯು ತಾನು ಕೆಲಸ ಮಾಡುತಿದ್ದಳಲ್ಲದೆ ಇತರರಿಗೆ ಕಲಿಸುತ್ತಲೂ ಇದ್ದಳು. ಇದರಿಂದ ಆ ಹಳ್ಳಿಯೊಂದು ಚಿಕ್ಕ ಪುಟ್ಟ ಉದ್ಯೋಗಗಳ ಕೇಂದ್ರವಾಗಿ ರೂಪಾಂತರಗೊಂಡಿತು; ಗ್ರಾಮೀಣ ಜನರ ಆದಾಯವೂ ಹೆಚ್ಚಿ ಅವರ ಸ್ಥಿತಿಗತಿಯಲ್ಲಿ ಸುಧಾರಣೆಯೂ ಸಾಧ್ಯವಾಯಿತು. ಲಲಿತೆಯ ಜಾದುವನ್ನು ಎಲ್ಲರೂ ಹೊಗಳತೊಡಗಿದರು.

ದೂರ ದೂರದ ಊರುಗಳಿಂದ ಜನರು ಲಲಿತೆಯನ್ನು ಕಾಣಲು ಬರುತಿದ್ದರು. ಅವರೊಡನೆ ನಾಲ್ಕಾರು ನಿಮಿಷ ಮಾತನಾಡಿ, ಕೈ ಜೋಡಿಸಿ ಕ್ಷಮೆಯಾಚಿಸುತಿದ್ದಳು. “ಕ್ಷಮಿಸಿ ನನಗೆ ತುಂಬ ಕೆಲಸವಿದೆ”. ಆಕೆಯು ಇಡಿಯ ಉದ್ಯೋಗ ಶಾಲೆಯಲ್ಲಿ ತಿರುಗಾಡುತಿದ್ದಳು; ತನ್ನ ಕೆಲಸಗಳನ್ನೂ ಸಮರ್ಪಕವಾಗಿ ಮಾಡಿ ಪೂರೈಸುತಿದ್ದಳು. ಇದನ್ನು ಕಂಡ ಯಾರೇ ಇರಲಿ, ಆಕೆ ನೇತ್ರಹೀನಳೆಂದು ಹೇಳುವಂತಿರಲಿಲ್ಲ.

ಲಲಿತೆ ನೇತ್ರ ಹೀನೆಯಾಗಿದ್ದರೂ ಉದ್ಯೋಗ ಶಾಲೆಯ ಮಾತೃವಾಗಿದ್ದಳು. ಪ್ರೀತಿಯ ಲಲ್ಲಿಯು ಮಾತೃ ಲಲಿತಾಬಾಯಿಯಾಗಿ ಹೆಸರು ಪಡೆದಳು.

## ೮ ಗಗನ ಪಾದರಕ್ಷೆ

ವಸಂತ ಋತು ಪ್ರಾರಂಭವಾಗಿದ್ದರೂ ವೈಶಾಖ ಮಾಸದ ಉರಿಯಿಂದ ಜನ ಜಂಗುಳಿಯು ಉಸಿರಾಡಿ ಬಿಟ್ಟ ಬಿಸಿಗಾಳಿಯಿಂದ ವಾತಾವರಣವು ತಣ್ಣಗಾಗಿರಲಿಲ್ಲ. ಗ್ರೀಷ್ಮವಿನ್ನು ತಾನೇ ಪಾದಾರ್ಪಣ ಮಾಡಬೇಕಾಗಿದ್ದರೂ ಅದರ ಬೇಗೆ ಈಗಾಗಲೇ ಮೊದಲಾಗಿತ್ತು. ಮನೆಯಲ್ಲಿ ರಾತ್ರೆ ಊಟಮಾಡಿ, ತನ್ನ ನೆಚ್ಚಿನ ಪತ್ನಿಯೊಡನೆ ಅನತಿದೂರದ ಮೈದಾನಿನತ್ತ ರಾಮಮೋಹನ ಗಾಳಿ ಸೇವನೆಗಾಗಿ ಹೊರಬಿದ್ದ. ದಾರಿಯಲ್ಲಿ ಆ ಮಾತು ಈ ಮಾತು ನಡೆದೂ ಬಿಟ್ಟಿತ್ತು. ಮೈದಾನನ್ನು ತಲಪಿಯೂ ಆಯಿತು.

ರಾಮಮೋಹನನ ಪತ್ನಿ ಸಲುಗೆಯಿಂದಲೇ ಪತಿಯೊಡನೆ ವ್ಯವಹರಿಸಿದ್ದಳು ಸಾಕಷ್ಟು ವಿದ್ಯಾಗುಣ ಸಂಪನ್ನೆಯಾಗಿದ್ದ ಆಕೆಯೊಡನೆಯೂ ರಾಮಮೋಹನ ಕೆಲವೊಮ್ಮೆ ತನ್ನ ಬುರುಡೆ ಬಿಚ್ಚುತ್ತಿದ್ದ. ಹಿಂದೊಮ್ಮೆ ವಿನೋದಮಾಡುವ ಉದ್ದೇಶದಿಂದ, ತನ್ನ ಪತ್ನಿಯ ಹಸ್ತ ಸವರಲು, ಆಕೆಯನ್ನು ಸನಿಯ ಕರೆದಾಗ, ಅವಳು ಹಿಂಜರಿಯಲು, ಹಸ್ತ ಸಾಮುದ್ರಿಕಾ ಲಕ್ಷಣವನ್ನು ತಾನು ಅರಿತಿರುವೆನೆಂದು ಡೋಂಗಿಬಿಟ್ಟು, ಆಕೆಯನ್ನು ಒಲಿಸಿದ್ದ; ಅಲ್ಲದೇ ಪತ್ನಿಯ ಮನಸ್ಸಮಾಧಾನಕ್ಕಾಗಿ ನಾಲ್ಕಾರು ಭವಿಷ್ಯವಾಣಿಯನ್ನೂ ರೇಖೆಗಳ ಆಧಾರದಿಂದ ಉಸುರಿದ್ದ. ಪಾಪ, ಜ್ಯೋತಿಷ್ಯ—ಭವಿಷ್ಯವೆಂದರೆ ಪ್ರಾಣಬಿಡಲೂ ಸಿದ್ಧಳಾಗಿದ್ದ ಆಕೆ, ಅವೆಲ್ಲವನ್ನೂ ನಂಬಿದ್ದಳು. ಪತಿದೇವನ ಕಪಟ ನಾಟಕಕ್ಕೂ ಬಲಿಬಿದ್ದಿದ್ದಳು.

ಮೈದಾನದಲ್ಲಿ ತಣ್ಣಗಿನ ಗಾಳಿಗೆ ಮೈಯೊಡ್ಡಿ ಸುರಿಯುತ್ತಿದ್ದ ಬೆವರನ್ನು ಆರಿಸಿಕೊಳ್ಳುವಷ್ಟರಲ್ಲಿ ಮೂಡುಗಿರಿಯ ಕೋಡುಗಲ್ಲಿನ ಮೇಲೆ ಬಾಲಚಂದ್ರನುದಯಿಸಿಬರುವುದು ದೃಗ್ಗೋಚರವಾಯಿತು. ಈ ಸೃಷ್ಟಿಯ

ವೈಚಿತ್ರ್ಯವನ್ನೇ ಕಣ್ದಣಿಯೆ ನೋಡ ನೋಡುತ್ತಿರುವಷ್ಟರಲ್ಲಿಯೇ ಪತ್ನಿಯ ದೃಷ್ಟಿ ಉತ್ತರದ ಕಡೆಗೆ ಹರಿಯಿತು. ಅಲ್ಲಿ ಸಪ್ತರ್ಷಿ ಮಂಡಳ ಕ್ಕಿಂತ ಸ್ವಲ್ಪ ಎತ್ತರದಲ್ಲಿ ಒಂದು ನಕ್ಷತ್ರವು ತೋರಿತು. ಬಹುಶಃ ಆಕೆ ಆ ನಕ್ಷತ್ರವನ್ನು ಇದುವರೆಗೆ ನೋಡಿರಲಿಲ್ಲ; ಎಂತಲೇ ತನ್ನ ಜ್ಯೋತಿಷಿ ಮನಪ್ರಿಯನೊಡನೆ ಕೇಳಿದಳು.

ರಾಮಮೋಹನ ಅದನ್ನು ನೆಟ್ಟ ದೃಷ್ಟಿಯಿಂದೀಕ್ಷಿಸಿದ. ಅದು ನಕ್ಷತ್ರದಂತೆ ಕಂಡು ಬರಲಿಲ್ಲ. ಗ್ರಹವೂ ಅಲ್ಲ. ಏನೋ ಒಂದು ಅದ್ಭುತ ನಕ್ಷತ್ರವು ಆಕಾಶದಲ್ಲಿ ಮೂಡಿ ಬಂದಿರಬೇಕು. ಧೂಮ ಕೇತು ಮೊದಲಾದ ವಿಪದ್ದರ್ಶಕಗಳ ಕುರಿತು ಆತ ಕೇಳಿದ್ದ. ಆದರೆ, ಇದು ಅವಾವುಗಳಂತೆಯೂ ಇರಲಿಲ್ಲ. ವೃತ್ತಾಕಾರವೂ ಅಲ್ಲ; ನಕ್ಷತ್ರಾಕಾರವೂ ಅಲ್ಲ, ಕೊಂಚ ಉದ್ದಗಲವಾಗಿದ್ದು ವಕ್ರವಾಗಿತ್ತು. ನೋಟಕರಿಗೆ ಅದೊಂದು ಪಾದರಕ್ಷೆಯಂತೆ ಕಂಡು ಬರುತಿತ್ತು. ತಾನು ಜ್ಯೋತಿಷಿಯೆಂದು ನಿರರ್ಥಕವಾಗಿ ಕೊಚ್ಚಿಕೊಂಡ ತಪ್ಪಿಗೆ ಪ್ರಾಯಶ್ಚಿತ್ತ ಈಗ ಆಗಬೇಕಿತ್ತು. ಎಂತಲೇ ಪತ್ನಿಯೊಡನೆ ಹೇಳಿದ, "ನೋಡು, ಧೂಮಕೇತುವಿನ ಕುರಿತು ಕೇಳಿರುವಿಯಲ್ಲ? ಪ್ರಪಂಚಕ್ಕೆ ಅನಿಷ್ಟ ಒದಗುವಾಗ, ಇಂತಹವು ಗೋಚರವಾಗು ತ್ತವೆ. ಇದು ಅದರಂತಿಲ್ಲ. ಒಂದು ತೇಜೋರಾಶಿಯ ನಡುವೆ ಪಾದರಕ್ಷೆಯ ಆಕಾರದಲ್ಲಿದೆ. ಇದನ್ನು ಗಗನ ಪಾದರಕ್ಷೆಯೆಂದು ಶಾಸ್ತ್ರ ಹೇಳುತ್ತದೆ. ಬ್ರಿಟಿಷರು ವ್ಯಾಪಾರಕ್ಕಾಗಿ ಭಾರತಕ್ಕೆ ಬಂದಿಳಿ ಯುವ ಸಂದರ್ಭದಲ್ಲಿ ಒಮ್ಮೆ ಇದು ಗೋಚರವಾಗಿತ್ತಂತೆ. ಈಗ ಪುನಃ ತೋರಿಬರುತ್ತಿದೆ. ಭಾರತಕ್ಕೆ ಇಂದು ಏನೋ ಮಹದ್ವಿಪತ್ತು ಕಾಣಿಸಿಕೊಳ್ಳುವ ಮುನ್ಸೂಚನೆಯಿದು. ಶುಭಕಾರಿಯೆಂದಿಗೂ ಅಲ್ಲ. ಊರಿಗೆ ಬಂದುದನ್ನು ನಾವೂ ಅನುಭವಿಸಲೇ ಬೇಕು. ಅನ್ಯಥಾ ವಿಧಿಯಿಲ್ಲ." ಎಂದು ತಿಳಿಸಿದ. ಇನ್ನೂ ಹೆಚ್ಚು ಹೊತ್ತು ನಿಂತರೆ, ಅದರಿಂದ ರಹಸ್ಯ ಭೇದನವಾಗಬಹುದೆಂಬ ಅಂಜಿಕೆಯಿಂದ ಮನೆಗೆ ಪತ್ನಿಯನ್ನು ಕರೆತಂದ.

ರಾಮಮೋಹನನ ಊಹೆ ಸುಳ್ಳಾಗಿರಲಿಲ್ಲ. ಕೆಲವೇ ದಿನಗಳಲ್ಲಿ

ವರ್ತಮಾನ ಪತ್ರಿಕೆಗಳಲ್ಲಿ ಬೇರೆ ಬೇರೆ ಪ್ರದೇಶಗಳಲ್ಲಿ ಈ ಗಗನ ಪಾದ ರಕ್ಷೆ ಗೋಚರವಾದ ಸಂಗತಿಯೂ ಅದರ ಅಶುಭ ಲಕ್ಷಣಗಳೂ ಬೆಳಕು ಕಾಣತೊಡಗಿದುವು. ಭಾರತದಲ್ಲಿನ ಮಹಾ ಮಹಾ ಜ್ಯೋತಿಷಿಗಳು ಈ ಗಗನ ಪಾದರಕ್ಷೆಯ ಅಸ್ತಿತ್ವ, ಉದಯ, ಅಸ್ತ, ಗಮನಗಳ ಬಗ್ಗೆ ಉದ್ದುದ್ದ ಲೇಖನವನ್ನು ಬರೆದು ಪ್ರಕಾಶಿಸಿದರು, ಸೂರ್ಯ ಮಂಡಳದ ಒಂದಂಶವೇ ಗಗನ ಪಾದರಕ್ಷೆಯೆಂದು ಸೋಪಪತ್ತಿಕವಾಗಿ ಪ್ರತಿಪಾದಿಸಿ, ಅದು ಚಂದ್ರನ ಗುರುತ್ವಾಕರ್ಷಣದಿಂದ ಕೆಳಗಿಳಿಯಿತೆಂದೂ ಹೀಗಾಗಿ ಅದು ಚಂದ್ರ ಮಂಡಳದಲ್ಲಿ ದೀರ್ಘವರ್ತುಲಾಕಾರವಾಗಿ ಸುತ್ತುವರಿಯ ತೊಡಗುವುದೆಂದೂ ಒಬ್ಬರು ಬರೆದರೆ, ಇನ್ನೊಬ್ಬ ಪ್ರಸಿದ್ಧ ಜ್ಯೋತಿಷಿಯರು, ಗಗನ ಪಾದರಕ್ಷೆಯೆಂಬುದು ಶುಕ್ರ ನಕ್ಷತ್ರಕ್ಕಿಂತ ೪ ಕೋಟಿ ಮೈಲು ದೂರವಿರುವ ನಕ್ಷತ್ರ. ಇದು ಸೂರ್ಯನಿಗೆ ೪೦ ಸಾವಿರ ವರ್ಷಗಳಲ್ಲಿ ಒಂದು ಪ್ರದಕ್ಷಿಣೆ ಬರುವುದು. ಆದರೆ, ಸದ್ಯ ಶುಕ್ರ ಗ್ರಹದ ಆಕರ್ಷಣಾ ಶಕ್ತಿಯು ಕುಂಠಿತವಾದುದರ ಪರಿಣಾಮವಾಗಿ ಮತ್ತು ಚಂದ್ರನ ಗುರುತ್ವ ಶಕ್ತಿಯಿಂದದು ಚಂದ್ರನತ್ತ ಧಾವಿಸುತ್ತಿದೆ. ಹಾಗೆ ಓಡುತ್ತಿರುವಾಗ, ಅದು ಭೂವಿಯ ಮೇಲೂ ಬೀಳಬಹುದು. ಒಂದು ವೇಳೆ, ಹೀಗಾದಲ್ಲಿ ಅದು ಭೂಮಿಗಿಂತ ನಲುವತ್ತು ಪಾಲು ದೊಡ್ಡದಿರುವುದರಿಂದ ಸೃಷ್ಟಿಯೇ ನಾಶವಾಗಿ ಹೋಗುವುದರಲ್ಲಿ ಸಂದೇಹವಿಲ್ಲ ಎಂದು ಬರೆದರು. ಇದೇ ಬಗೆಯ ಹಲವಾರು ಜ್ಯೋತಿರ್ಮಾರ್ತಾಂಡರು ನಾನಾ ರೀತಿಯಾಗಿ ನೂತನ ಗ್ರಹವನ್ನು ವರ್ಣಿಸಿದರೂ, ಅದು ಪ್ರಪಂಚವನ್ನು ನಾಶಮಾಡಲೋಸುಗವೇ ಉದಯಿಸಿತು ಎಂದು ಅಭಿಪ್ರಾಯಪಟ್ಟರು.

ಅತ್ತ ಅಮೆರಿಕೆಯ ವೇಧಶಾಲೆಯಿಂದ ಬಂದ ಪ್ರಕಟಣೆಯೊಂದು ಈ ರೀತಿಯಿತ್ತು: "ಈಗ್ಗೆ ನಾಲ್ಕಾರು ದಿನಗಳಿಂದ ಆಕಾಶದಲ್ಲೊಂದು ಹನ್ನೆರಡನೆಯ ಗ್ರಹಗೋಚರಿಸತೊಡಗಿದೆ ಎಂಬ ಭಾರತೀಯ ವರದಿಯನ್ನು ಪರಿಶೀಲಿಸಲಾಯಿತು. ಅದು ಸತ್ಯವೆಂದು ತಿಳಿದು ಬಂದಿದೆ. ಈ ಗಗನ ಪಾದರಕ್ಷೆಯು ಸೂರ್ಯ ಮಂಡಲದಿಂದ ಸಿಡಿದು ಭೂಮಿಯತ್ತ ಧಾವಿಸುತ್ತಿದೆಯೆಂದೂ ಇದರ ವೇಗವು ತಾಸಿಗೆ ಒಂದು ನೂರು

ಸಾವಿರ ಮೈಲುಗಳೆಂದೂ ಅಂದಾಜು ಮಾಡಲಾಗಿದೆ. ಪ್ರಮಾಣದ ದಲ್ಲಿದು ಭೂಮಿಗಿಂತ ೪೦ ಪಾಲು ದೊಡ್ಡದಿದ್ದರೂ ಅದರ ವೇಗವನ್ನು ನೋಡುವಾಗ, ಭಾರವು ಭೂಮಿಯ ಭಾರದ ಕಾಲಂಶದಷ್ಟು ಮಾತ್ರ ವಿದೆಯೆಂದು ತಿಳಿಯಲಾಗಿದೆ. ಅದು ಈಗ ಭೂಮಿಗಿಂತಸುಮಾರು ೮೦ ಕೋಟಿ ಮೈಲು ದೂರದಲ್ಲಿದೆಯೆಂದೂ ಇದೇ ವೇಗದಲ್ಲಿ ಅದು ಉರುಳುತ್ತ ಬಂದರೆ, ಸುಮಾರು ಆರು ತಿಂಗಳು ಎಂಟು ದಿವಸ ಕಳೆಯುವಷ್ಟರಲ್ಲಿ ಭೂಮಿಗೆ ಉರುಳುವುದೆಂದೂ ಅಂದಾಜುಮಾಡಲಾ ಗಿದೆ. ಆದರೂ ಚಂದ್ರನ ಅಥವಾ ಇತರ ಗ್ರಹಗಳ ಆಕರ್ಷಣ ಶಕ್ತಿ ಯಿಂದ ನಡುದಾರಿಯಲ್ಲಿಯೇ ತಡೆಯಲ್ಪಟ್ಟರೆ, ಅದು ಉಪಚಂದ್ರನಂತೆ ಚಂದ್ರನಿಗೋ ಇತರ ಗ್ರಹಗಳಿಗೋ ಸುತ್ತುತ್ತ ಇರುವುದು. ಆಗ ಭೂಮಿಯಲ್ಲಿದ್ದವರಿಗೆ ಯಾವ ಅಪಾಯವೂ ಇಲ್ಲ."

ಲಂಡನ್ನಿನ ವೇಧಶಾಲೆ ಸಾಮಾನ್ಯವಾಗಿ ಅಮೆರಿಕೆಯನ್ನೇ ಸಮ ರ್ಥಿಸಿತಾದರೂ, ಚಂದ್ರನ ಆಕರ್ಷಣಕ್ಕೆ ಗುರಿಯಾಗುವ ಸಂಭವ ವಿಲ್ಲವೆಂದೂ ಅದು ಭೂಮಿಯ ಆಕರ್ಷಣಾ ಶಕ್ತಿಯ ಕ್ಷೇತ್ರಕ್ಕೊಳ ಪಟ್ಟರೆ, ಆಗ ಭೂಮಿಯ ಮೇಲೆ ಉರುಳುವುದೆಂದೂ ಸಾರಿತು. ಅಲ್ಲದೆ, ತೀರ ಹಗುರವಾದ ಗ್ರಹವಾದುದರಿಂದ, ಅತಿ ವೇಗವಾಗಿ ಬೀಳುತ್ತಿರುವಾಗ ತನ್ನ ಗತಿಯನ್ನೇ ಬದಲಾಯಿಸಬಹುದೆಂದೂ ಆಗ ಅದರಿಂದ ಏನೊಂದೂ ಹಾನಿ ನಮಗಿಲ್ಲವೆಂದೂ ಧೈರ್ಯ ಹೇಳಿತು ಇದೇ ಮಾದರಿಯಲ್ಲಿ ರಶ್ಯನ್ ವೇಧಶಾಲೆಯೊಂದು ಹೇಳಿಕೆಯಿತ್ತು ಅದು ಉರುಳುವುದಾದರೆ, ಉತ್ತರ ಸಮುದ್ರದ ತೀರದಲ್ಲಿ ಎಂದು ಭವಿಷ್ಯ ನುಡಿಯಿತು.

ಹೀಗೆ ಪ್ರಪಂಚದ ನಾನಾ ರಾಷ್ಟ್ರಗಳ ಪ್ರಸಿದ್ಧ ವಿಜ್ಞಾನಿಗಳೆ ಲ್ಲರೂ ಕಣ್ಣಲ್ಲಿ ಎಣ್ಣೆ ಹೊಯ್ದು ಈ ನೂತನ ಗ್ರಹದ ಚಲನವಲನಗ ಳನ್ನೇ ಪರಿಶೀಲಿಸುತಿದ್ದರು. ಜಗತ್ತೆಲ್ಲವೂ ಕಣ್ಣಾಗಿ ಈ ಕುರಿತಾದ ವಾರ್ತೆಗಳನ್ನು ಕಲೆ ಹಾಕುತಿತ್ತು. ಪತ್ರಿಕೆಗಳು "ಗಗನ ಪಾದರಕ್ಷೆ" ಎಂಬ ಹೊಸತೊಂದು ಶೀರ್ಷಿಕೆಯನ್ನೇ ತೆರೆದುವು, ಎಲ್ಲೆಲ್ಲಿಯೂ ಇದೇ ಮಾತುಕಥೆ ನಡೆಯಿತು. ಸಂತೆಕಟ್ಟೆಗಳಲ್ಲಿ, ಹೋಟೇಲುಗಳಲ್ಲಿ,

ಜೀನಸು ಅಂಗಡಿಗಳಲ್ಲಿ, ಬೀಡನವನಲ್ಲಿ ಗಗನ ಪಾದರಕ್ಷೆಯ ಕಥನವೇ ನಡೆಯುತ್ತಿತ್ತು.

ಕೆಲವು ದಿನಗಳು ಗತಿಸಿ ಹೋದುವು. ಅಮೇರಿಕನ್ ವೇಧಶಾಲೆಯು ತನ್ನ ನೂತನ ಪರಿಶೀಲನಾವಧಿಯಲ್ಲಿ "ಗಗನ ಪಾದರಕ್ಷೆ"ಯು ಭೂಮಿಯ ಮೇಲೆ ಇನ್ನು ೪೮ ದಿನಗಳಲ್ಲಿ ಉರುಳುವುದು" ಎಂದು ಘೋಷಿಸಿತು. ಇದುವರೆಗೆ ಮೌನ ತಾಳಿದ್ದ ಸನ್ಯಾಸಿಗಳು, ಪಾದ್ರಿಗಳು, ಮೌಲ್ವಿಗಳು ಎಲ್ಲರೂ ಎಚ್ಚರವಾದರು. ತಂತಮ್ಮ ಸಂಪ್ರದಾಯಗಳನ್ನು ಅನುಸರಿಸುವ ತಮ್ಮ ಶಿಷ್ಯರಿಗೆ ಅಪಮೃತ್ಯು ಬಂದೊದಗಿದರೂ ನೇರವಾಗಿ ಸ್ವರ್ಗಕ್ಕೆ ಕಳಿಸುವ ಸೇವಾಬುದ್ಧಿಯಿಂದ, ತ್ಯಾಗ, ಸೇವೆಗಳ ಉಪದೇಶವೀಯತೊಡಗಿದರು. ಪರಮಾತ್ಮನನ್ನು ಇದುವರೆಗೆ ಮರೆತಿದ್ದರೂ ಕೊನೆಯ ಕಾಲದಲ್ಲಿಯಾದರೂ ಅವನನ್ನು ಹಾಡಿ ಕೊಂಡಾಡಲು ವಿನಂತಿಸಿದರು. ಕರಪತ್ರಗಳನ್ನು ಹಂಚಿದರು. ಮನೆ ಮಠಗಳು, ಇಗರ್ಜಿಗಳು, ಮಸೀದಿಗಳು, ಆಶ್ರಮಗಳು ಎಲ್ಲೆಲ್ಲಿಯೂ ಜನರು ದೈವಭಕ್ತಿಯನ್ನು ಪ್ರದರ್ಶಿಸಿ ಗಗನ ಪಾದರಕ್ಷೆಯಿಂದ ಹತರಾದರೂ ಮೋಕ್ಷವನ್ನು ದಯಪಾಲಿಸುವಂತೆ ಅತೀವ ನಮ್ರರಾಗಿ ಬೇಡಿಕೊಂಡರು. ತಾವು ಇದುವರೆಗೆ ಮಾಡಿದ ಅಪರಾಧಗಳು, ಕಳ್ಳತನ, ಸುಲಿಗೆಗಳನ್ನೂ ಹೇಳಿದ ಸುಳ್ಳುಗಳನ್ನೂ ದೇವರ ಪ್ರತಿನಿಧಿಗಳ ಮುಂದೆ ಚಾಚೂ ತಪ್ಪದೆ ಹೇಳಿ ತಮ್ಮ ಅಪರಾಧ ಸರ್ವಸ್ವವನ್ನೂ ಕ್ಷಮಿಸಿ ಬಿಡುವಂತೆ ತಪ್ಪು ಕಾಣಿಕೆ ತೆತ್ತರು. ಪಾಪಗಳನ್ನು ಹೇಳಿ ಕೊಂಡರು.

ಭಾರತದಲ್ಲಿಯಂತೂ ಹೇಳುವುದೇ ಬೇಡ. ಗಂಗಾ ಕಾವೇರೀ ನದಿಗಳಲ್ಲಿ ನೀರು ನಾಲ್ಕು ಅಡಿ ಮೇಲೇರಿತು. ೨೪ ತಾಸೂ ಮುಳುಗಿ ಸ್ನಾನ ಮಾಡುತಿದ್ದವರ ಸಂಖ್ಯೆಯೇ ಅಗಣಿತವಿರುವಾಗ, ಮಿಂದು ಪಾಪ ಪರಿಹಾರ ಮಾಡಿಕೊಂಡವರನ್ನು ಯಾರು ಲೆಕ್ಕ ಹಾಕಬೇಕು? ಕಾಶಿ—ಗೋಕರ್ಣಗಳಲ್ಲಿ ತಮಗೆ ತಾವೇ ಪಿಂಡ ಹಾಕಿಕೊಳ್ಳಲು ಜನರ ಸಂದಣಿ ನುಗ್ಗ ತೊಡಗಿತು. ಗೋದಾನಾದಿಗಳು ನಡೆದುವು. ಅನ್ನದಾನ, ವಸ್ತ್ರದಾನ ಪಡಕೊಳ್ಳುವವರೇ ಇಲ್ಲದಂತಾಯಿತು. ಎಲ್ಲೆಲ್ಲಿಯೂ ಉಪದೇಶ, ಹರಿಕಥೆ, ಭಾಗವತ ಭಾರತ, ರಾಮಾಯಣ ಪಠನಗಳು,

ಕುರಾನ್, ಬೈಬಲ್ ಗೀತೆಗಳ ಘೋಷ! ಪ್ರಪಂಚದ ಎಲ್ಲ ಪ್ರಜೆಗಳೂ ಅನನ್ಯ ಮನಸ್ಕರಾಗಿ ತಮ್ಮೆಲ್ಲರ ಕೊನೆಯ ಗಳಿಗೆಯನ್ನು ಇದಿರು ನೋಡುತ್ತ, ಮೋಕ್ಷಗಾಮಿಗಳಾಗುವ ಸದುದ್ದೇಶದಿಂದ ಗಗನ ಪಾದ ರಕ್ಷೆಯ ಹೆದರಿಕೆಯಿಂದ ಕೂಡಿದವರಾಗಿದ್ದರು.

"ಮಾನವಜನ್ಮ ದೊಡ್ಡದು. ಆದುದರಿಂದ, ಬದುಕಲಿರುವ ಕೆಲವೇ ದಿನವಾದರೂ ಸಹೋದರತೆಯಿಂದ ಬಾಳಿರಿ; ಪರೋಪಕಾರವನ್ನು ಮಾಡಿರಿ" ಎಂಬ ಭಿತ್ತಿ ಪತ್ರಗಳು ಎಲ್ಲೆಲ್ಲಿಯೂ ಕಾಣಿಸಿಕೊಂಡುವು. ಜಗತ್ತಿನ ಎಲ್ಲ ಭಾಷೆಗಳ ಲಿಪಿಯಲ್ಲಿಯೂ ಇವು ಪ್ರಕಾಶಿತಗೊಂಡಿದ್ದುವು "ಆರಾಮ್ ಹಾರಾಮ್ ಹೈ" ಇನ್ನು ಮುಂದಾದರೂ ದೇಶಕ್ಕಾಗಿ ದುಡಿ ಯಿರಿ ಎಂದರು ರಾಷ್ಟ್ರನಾಯಕರು.ಪ್ರಳಯ ಕಾಲ ಸಮೀಪಿಸುತ್ತ ಬರುತ್ತಿ ರುವುದರಿಂದ ದೇಶ ದೇಶಗಳ ಎಲ್ಲ ವ್ಯವಹಾರಗಳನ್ನೂ ತೀವ್ರವಾಗಿ ಮುಗಿ ಸಿಕೊಳ್ಳಬೇಕೆಂದು ಸರಕಾರಗಳ ನಡುವೆ ತಂತಿಗಳು ರವಾನಿಸಲ್ಪಡತೊಡ ಗಿದವು. ಅಂಚೆ ತಂತಿ ಕಛೇರಿಗಳು ಗ್ರಾಹಕರಿಂದ ತುಂಬಿಹೋದುವು. ಬಟವಾಡೆ ಮಾಡಲು ಜನ ಸಾಲದಾಯಿತು.

ಎಲ್ಲೆಲ್ಲಿಯೂ ನಾನಾ ಬಗೆಯಾಗಿ ದೈವ ಲೀಲೆಯನ್ನು ವಿವರಿ ಸುವ ದೇವರ ಸ್ತೋತ್ರಗಳೂ ಜಯಕಾರವೂ ತುಂಬಿ ತುಳುಕಾಡುತಿ ದ್ದುವು. ಎಲ್ಲರೂ ತಮ್ಮ ಮೇಲೆ "ಗಗನ ಚಪ್ಪಲಿ"ಯು ಬಿದ್ದು ಪರಂ ಧಾಮುವಾಗುವ ಸುದಿನವನ್ನೇ ಇದಿರು ನೋಡುತಿದ್ದರು.

ನಿಶ್ಚಿತ ದಿನಕ್ಕೆ ಇನ್ನು ಒಂದು ವಾರಗಳ ಕಾಲ ಉಳಿದಿವೆ. ಜನತೆ ಉತ್ಸಾಹ ಕ್ಷೋಭೆಗಳಿಂದ ತೃಪ್ತಿ, ಅತೃಪ್ತಿ, ಸುಖ, ದುಃಖಗ ಳಲ್ಲಿ ಮುಳುಗಿದ್ದು ಜಯಕಾರ ಹಾಹಾಕಾರಗಳನ್ನು ಮಾಡತೊಡಗಿತ್ತು. ಮೊದಲಿದ್ದ ಉತ್ಸಾಹ ಅವರಲ್ಲಿ ಇಂದಿರಲಿಲ್ಲ. ಇಷ್ಟು ಬೇಗ ಪ್ರಳ ಯವಾಗುವುದನ್ನೂ ಅವರು ಮನಸ್ವೀ ಒಪ್ಪಲಿಲ್ಲ. ಆದರೆ, ಆಕಾಶವು ದುರುವಾಗ ಕೊಡೆ ರಕ್ಷಿಸದು ಎಂಬಂತೆ, ಅವರೆಲ್ಲರೂ ನಿಸ್ಸಹಾಯಕ ರಾಗಿದ್ದರು.

ಎಲ್ಲ ವೇಧ ಶಾಲೆಗಳಲ್ಲಿಯೂ ಈ ಬಗ್ಗೆ ವರದಿ ಪ್ರಕಟವಾಗು ತಿತ್ತು. ರಶ್ಯನ್ ವರದಿಯಲ್ಲಿ ಈ ಗಗನ ಪಾದರಕ್ಷೆಯ ವೇಗವೀಗ

ಕುಂಟುತ್ತ ನಡೆದಿದೆಯೆಂದು ಸೂಚಿಸಲಾಗಿತ್ತು. ಭಾರತದ ಸುವಿಖ್ಯಾತ ಜ್ಯೋತಿರ್ವಿದ್ಯಾ ಪಾರಂಗತರೊಬ್ಬರು, ಭೂಮಿಯ ಜನ್ಮ ಗ್ರಹ ಸ್ಫುಟದ ಬಲದಿಂದ, ಭೂಮಿಯ ಆಯುಷ್ಯ ಇನ್ನೂ ಇರುವುದೆಂದೂ, ಆದುದರಿಂದ ಅದು ಭೂಮಿಯ ಮೇಲೆ ಉರುಳಲಾರದೆಂದೂ ಖಡಾಖಂಡಿತವಾಗಿ ಪ್ರಮಾಣಬದ್ಧವಾಗಿ ಸಾಧಿಸಿದರು. ಅಮೇರಿಕದ ವೇಧಶಾಲೆಯು ಗಗನ ಪಾದರಕ್ಷೆಯು ಭೂಮಿಯ ಗುರುತ್ವಾಕರ್ಷಣ ಶಕ್ತಿಗಿಂತಲೂ ಅತ್ಯಧಿಕ ಶಕ್ತಿಯ ಪ್ರಭಾವದಿಂದ ತನ್ನ ಪಥವನ್ನು ಬದಲಾಯಿಸುವ ಪೂರ್ವ ಸೂಚನೆಗಳು ತೋರಿ ಬರುತ್ತವೆ ಎಂದು ವರದಿ ಮಾಡಿತು.

ಒಮ್ಮೆ ತಮ್ಮ ಪ್ರಾಣವನ್ನು ತೊರೆಯಲು ನಿರ್ವಾಹವಿಲ್ಲದೆ ಒಪ್ಪಿ ಸನ್ನದ್ಧರಾಗಿದ್ದವರೆಲ್ಲರೂ ಮತ್ತೆ ಬದುಕುವ ಅವಕಾಶ ಒದಗೀತೆಂದು ಹಾರೈಸಿದರು. ಆದರೆ ಲಂಡನ್ ವೇಧಶಾಲೆಯು ಭೂಮಿಯ ಕಡೆಗೆ ಬೀಳುತ್ತಿರುವ ಗಗನ ಪಾದರಕ್ಷೆಯ ವೇಗವೀಗ ಇಮ್ಮಡಿಯಾಗಿದೆಯೆಂದೂ ಆದುದರಿಂದ ಇನ್ನು ಮೂರು ದಿನಗಳೊಳಗೆ ಅದು ಭೂಮಿಯ ಮೇಲೆ ಬೀಳುವುದು ನಿಶ್ಚಯವೆಂದೂ ಹೇಳಿದುದನ್ನು ಕಂಡು ಎಲ್ಲರೂ ಬೆದರಿದರು.

ನಿಶ್ಚಿತ ದಿನ ಬಂತು. ಅಂದೂ ಆಕಾಶದಲ್ಲಿ ಗಗನ ಪಾದರಕ್ಷೆ ತೋರಿ ಬರುತಿತ್ತು. ಭೂಮಿಯ ಮೇಲೆ ಮಾತ್ರ ಬೀಳಲಿಲ್ಲ. ಜನರು ಆಶ್ಚರ್ಯ ಉಲ್ಲಾಸಗಳಿಂದ ಹೊಸ ವರದಿಗಳಿಗಾಗಿ ಕಾಯತೊಡಗಿದರು. ನಾಲ್ಕು ದಿನಗಳ ತರುವಾಯ ವರ್ತಮಾನ ಪತ್ರಿಕೆಗಳಲ್ಲಿ ದೊಡ್ಡ ಅಕ್ಷರಗಳಲ್ಲಿ ಒಂದು ವಾರ್ತೆ ಪ್ರಕಟವಾಯಿತು.

"ಗಗನ ಪಾದರಕ್ಷೆಯ ಪಥ ಪರಿವರ್ತನೆ' ಭೂಮಿಯು ಗಂಡಾಂತರದಿಂದ ಪಾರಾಯಿತು. ಸೋವಿಯತ್, ಬ್ರಿಟಿಷ್ ಮತ್ತು ಅಮೆರಿಕನ್ ವೇಧಶಾಲೆಯ ಪ್ರಧಾನರ ಜಂಟಿ ಹೇಳಿಕೆ".

ಕಾತರಪೂರ್ಣ ಜನತೆ ದೀರ್ಘವಾದ ನಿಟ್ಟುಸಿರೊಂದನ್ನು ಬಿಟ್ಟು ಹಾಯೆಂದುಕೊಂಡಿತು. ಮರುದಿನದಿಂದ ಎಲ್ಲರೂ ತಂತಮ್ಮ ಉದ್ಯೋಗಗಳಿಗೆ ನಿಶ್ಚಿಂತರಾಗಿ ತೆರಳಿದರು,

ರಾಮಮೋಹನನೊಡನೆ ಆತನ ಪತ್ನಿ ಕೇಳಿದಳು— "ಅಲ್ಲ, ನೀವೊಬ್ಬ ಪ್ರಸಿದ್ಧ ಜ್ಯೋತಿಷಿಯಂತೆ ಲೋಕಕ್ಕೆ ಅನಿಷ್ಟ ಸೂಚಕವಾಗಿಯೇ ಈ ಗಗನ ಪಾದರಕ್ಷೆ ಕಾಣಿಸಿಕೊಳ್ಳುತ್ತಿದೆ ಎಂದಿರಲ್ಲಾ ?"

"ಹೌದು".

"ಈಗ ಕೆಲದಿನಗಳಿಂದ ಕಾಣಿಸಿಕೊಂಡ ಈ ಗ್ರಹದಿಂದ ಏನಾಯಿತು? ಇಲ್ಲದ ಕಥೆಗಳನ್ನು ಕಟ್ಟಿ, ವಿಜ್ಞಾನಿಗಳೂ, ಜ್ಯೋತಿಷಿಗಳೂ ಹಾರಾಡಿದರಷ್ಟೆ? ಅನಿಷ್ಟವೆಲ್ಲಿ ಬಂತು?"

"ಅಯ್ಯೋ ಪೆದ್ದೆ, ಯಾವುದು ಸುಳ್ಳಾದರೂ ಜ್ಯೋತಿಷ್ಯ ಸುಳ್ಳಾಗದೆಂಬುದು ನಿನಗಿನ್ನೂ ಗೊತ್ತಾಗಲಿಲ್ಲವೆ?"

"ಈಗ ಅದೂ ಸುಳ್ಳಾಗಿ ಹೋಯಿತಲ್ಲ; ನಿಮ್ಮಂತಹ ಸುಪ್ರಸಿದ್ಧ ಜ್ಯೋತಿಷಿಗಳಿಂದ!"

"ನಿನಗಿನ್ನೂ ಗೊತ್ತಾಗಿಲ್ಲ ನೋಡು, ಈ ಗಗನ ಪಾದರಕ್ಷೆಯಿಂದ ಲೋಕಕ್ಕೆ ಹಾನಿಯೊದಗಿಲ್ಲವೆ?"

"ಎಲ್ಲಿ, ಎಲ್ಲಾ ಸುಳ್ಳಾಗಿ ಹೋಯಿತಲ್ಲಾ ?"

"ನೋಡು, ನೀನೇ ಎಷ್ಟು ಹೆದರಿದ್ದೆ ?"

"ಹೆದರಿದ್ದೇನೋ ಹೌದು. ಆದರೆ, ಈಗ..."

"ಅದೇ ನೋಡು, ಲೋಕದಲ್ಲಿರುವ ಎಲ್ಲ ಜನರೂ ಆರು ತಿಂಗಳುಗಳ ಕಾಲ ಮರಣ ಭಯದಿಂದ ಥರ ಥರ ನಡುಗುವುದಕ್ಕಿಂತಲೂ ಹೆಚ್ಚಿನ ಅನಿಷ್ಟ ಬೇರೇನಿದೆ?"

ಪತ್ನಿಯ ಬಾಯಿ ಮುಚ್ಚಿಸಿ ರಾಮಮೋಹನ ಗೆದ್ದವನಂತೆ ತೋರಿಸಿಕೊಂಡ.

## ೯ ಅಂಧಕಾರದ ಅಂಜಿಕೆ

ಲಲಿತೆಗೆ ಕತ್ತಲೆಂದರೆ ಆಗದು ಕಣ್ಣುಗಳಿಗೆ ಕತ್ತಲೆ ಕವಿದೊಡನೆಯೇ ಆಕೆಯ ಹೃದಯದಲ್ಲಿ ಹೆದರಿಕೆಯು ಹರಡಿ ಬಿಡುತಿತ್ತು. ಇದರಿಂದಾಗಿ ಗಟ್ಟಿಯಾಗಿ ಕಿರುಚಿಕೊಳ್ಳುತಿದ್ದಳು. ಸಂಜೆಯ ನಸುಗತ್ತಲು ಹರಡುತ್ತಲೇ ಆಕೆಯು ಮನೆಯ ಕಿಟಕಿ ಬಾಗಿಲುಗಳನ್ನು ಮುಚ್ಚಿ ಬಿಡುತಿದ್ದಳು. ವಿದ್ಯುದ್ದೀಪಗಳನ್ನು ಹಚ್ಚುತಿದ್ದಳು ಆದರೂ ಕೆಲವೊಮ್ಮೆ ಮುಚ್ಚಿದ ಕಿಟಕಿ ಬಾಗಿಲುಗಳತ್ತ ತೀವ್ರ ದೃಷ್ಟಿಯಿಂದ ನೋಡುತ್ತ ಗಡಗಡನೆ ನಡುಗುತಿದ್ದಳು. ಆಗಾಗ ವಿಲಕ್ಷಣವಾಗಿ ಕೂಗುತಿದ್ದಳು. ಗಂಟಲನ್ನು ಯಾರೋ ಹಿಡಿದು ಅದುಮುತ್ತಿರುವಂತೆ ಆಕೆ ಬಿಕ್ಕಳಿಸಿ ಬೊಬ್ಬಿಡಲು ಪ್ರಯತ್ನಿಸುತಿದ್ದಳು. ಕೆಲವು ಕ್ಷಣಗಳವರೆಗೆ ನಿಶ್ಚೇಷ್ಟಿತಳಾಗಿ ಬಿದ್ದು ಬಿಡುತಿದ್ದಳು. ಇಂತಹ ವಿಚಿತ್ರ ಕಾಯಿಲೆ ಲಲಿತೆಗೆ ಕಾಣಿಸಿದುದು ಇಂದು ನಿನ್ನೆಯಲ್ಲ; ಸುರೇಶ ಆಕೆಯನ್ನು ವಿವಾಹವಾದಂದಿನಿಂದಲೂ ಹೆದರಿಕೆಯ ಭಯಾನಕ ರೋಗ ಆಕೆಯನ್ನು ಕಾಡುತಿತ್ತು. ಅದಕ್ಕೂ ಮೊದಲು ಇದ್ದಿರಬಹುದು; ಯಾರಿಗೆ ಗೊತ್ತು?

ಸುರೇಶನೊಡನೆ ಲಲಿತೆ ಪದೇ ಪದೇ ಅಂದಿದ್ದಳು: – "ಕತ್ತಲೆಯಲ್ಲಿ ನನ್ನೊಬ್ಬಾಕೆಯನ್ನೇ ಬಿಟ್ಟುಹೋಗ ಬೇಡಿ. ನನಗೆ ಹೆದರಿಕೆಯಾಗುತ್ತದೆ. ಯಾರೋ ನನ್ನನ್ನು ಕುತ್ತಿಗೆ ಹಿಸುಕಿ ಅದುಮುತ್ತಿರುವಂತೆ ಭಾಸವಾಗುತ್ತದೆ" ಎಂದು. ಸುರೇಶನಾದರೂ ಆಕೆಯ ಹೇಳಿಕೆಯನ್ನು ಮೀರುತ್ತಿರಲಿಲ್ಲ. ರಾತ್ರಿಯಿಡಿ ಕೋಣೆಯೊಳಗೆ ವಿದ್ಯುದ್ದೀಪವುರಿಯುತಿತ್ತು. ಅಪ್ಪಿ ತಪ್ಪಿಯಾದರೂ ಅದನ್ನು ನಂದಿಸುವಂತಿಲ್ಲ. ಕರೆಂಟು ಬಂದಾಗಿ ದೀಪ ಆರಿಹೋದರೆ ಲಲಿತೆಯ ಚೀತ್ಕಾರ ಸುತ್ತಲಿನವರನ್ನು ಎಬ್ಬಿಸುತಿತ್ತು. ಇದಕ್ಕಾಗಿ ಆಪತ್ಕಾಲಕ್ಕೆಂದು

ನಾಲ್ಕಾರು ಮೇಣದ ಬತ್ತಿಯನ್ನೂ ಬೆಂಕಿ ಪೆಟ್ಟಿಗೆಗಳನ್ನೂ ಸುರೇಶ ಹಾಸಿಗೆಯ ಪಕ್ಕದಲ್ಲಿರಿಸುತಿದ್ದ.

ಅಸಹಾಯಕನಾದ ಸುರೇಶನಿಗೆ ಈ ಅಂಜಿಕೆಯ ಅಂಟುರೋಗವು ವಿಲಕ್ಷಣವಾಗಿ ಕಂಡುದು ಸ್ವಾಭಾವಿಕ. ಆತ ಹೆದರುವ ಕಾರಣವಿಲ್ಲ ವೆಂದು ಅದೆಷ್ಟು ಸಮಜಾಯಿಸಿದರೂ ತಿಳಿಸಿ ಹೇಳಿದರೂ ಆಕೆಯ ರೋಗ ವಾಸಿಯಾಗುವಂತಿರಲಿಲ್ಲ. ಒಮ್ಮೊಮ್ಮೆ ಲಲಿತೆ ಮುಚ್ಚಿದ ಕಿಟಕಿಯತ್ತಲೇ ನೋಡುತಿದ್ದಳು. ಇದ್ದಕ್ಕಿದಂತೆ 'ಅಯ್ಯಯ್ಯೋ' ಎಂದು ಬೆಚ್ಚಿಬೆದರಿ ಆರ್ಭಟಿಸುತಿದ್ದಳು. "ಯಾರೋ ಬಂದರು; ಬಂದರು; ಒಳ ಬರಲು ಬಿಡಬೇಡಿ, ಬಿಡಬೇಡಿ. ನನಗೆ ಹೆದರಿಕೆಯಾಗುತ್ತದೆ" ಯೆಂದು ಕೂಗಿಕೊಳ್ಳುತಿದ್ದಳು. ಸುರೇಶ ಸುತ್ತಮುತ್ತ ದೃಷ್ಟಿ ಹಾಯಿಸುತಿದ್ದ; ಮುಚ್ಚಿದ್ದ ಕಿಟಕಿ ಬಾಗಿಲುಗಳು ಮುಚ್ಚಿಯೇ ಇರುತಿದ್ದುವು; ಉರಿ ಯುವ ದೀಪ ಉರಿಯುತ್ತಲೇ ಇರುತಿತ್ತು. ಇಂತಹ ಹೊಸ ರೋಗ ವನ್ನು ವಾಸಿ ಮಾಡುವುದು ಹೇಗೆಂಬುದೇ ಆತನಿಗರಿಯದಾಗಿತ್ತು.

ತನ್ನ ಸ್ನೇಹಿತರ, ಹಿತಚಿಂತಕರ ಸಲಹೆಯಂತೆ ಪ್ರಸಿದ್ಧರಲ್ಲಿ ಪ್ರಸಿ ದ್ಧರಾದ ಡಾಕ್ಟರರನ್ನು ಕಂಡಾಯಿತು. ಸ್ವಯಂ ರೋಗಿಯೇ ತಿಳಿಯದ ರೋಗಕ್ಕೆ ಅವರೇನು ಮದ್ದುಕೊಟ್ಟಾರು? ಸಮಾಧಾನಕ್ಕಾಗಿ ನೀರು ಕುಡಿಸಿದರು; ಬಿಲ್ಲೆಗಳನ್ನು ತಿನ್ನಿಸಿದರು. ಚುಚ್ಚು ಮದ್ದಿನ ಪ್ರಯೋ ಗವೂ ನಡೆಯಿತು. ಸುರೇಶನು ಸುರಿದ ಹಣವೇನೋ ನೆರೆಯಾಗಿ ಹರಿ ಯಿತೇ ಹೊರತು ಲಲಿತೆಯ ಜೀನೆ ಸರಿಯಲೇ ಇಲ್ಲ. ವೈದ್ಯರಿಂದಾಗ ಲಿಲ್ಲವೆಂದಾದ ಮೇಲೆ ಭೂತಪ್ರೇತಗಳತ್ತ ಮನಸ್ಸು ಓಡುವುದರಲ್ಲಿ ಆಶ್ಚ ರ್ಯವಿಲ್ಲ. ಮಾಯ, ಮಂತ್ರ, ಮೋಡಿ ಎಂದು ಮುಂತಾಗಿ ಜ್ಯೋತಿಷ್ಕ ರಿಗೆ ಹಣ ಸುರಿದಾಯಿತು; ಅಮಾವಾಸ್ಯೆಯ ಶುಭದಿನಗಳಲ್ಲಿ ಸಮುದ್ರ ಸ್ನಾನ ಮಾಡಿಯಾಯಿತು; ಉತ್ತಮ--ನೀಚ ದಾನ ನಡೆಯಿತು; ಸಂತ ರ್ಪಣೆ ಸಾಂಗವಾಗಿ ಮುಗಿಯಿತು. ಕುಟುಂಬದಲ್ಲಿ ಸತ್ತು ಹೋದವ ರಿಗೆಲ್ಲಾ ಪಿಂಡದಾನ ನೀಡಿಯಾಯಿತು. ಅಶ್ವತ್ಥ ಪ್ರದಕ್ಷಿಣೆ, ದೇವ ದರ್ಶನ, ನಾಗತಂಬಿಲ ಯಾವುದನ್ನು ಬಾಕಿ ಬಿಡಲಿಲ್ಲ. ಎಂತಾದರೂ ಈ ಭಯಾನಕ ಜಾಡ್ಯ ವಾಸಿಯಾದರೆ ಸಾಕೆಂದು ಸೇಚಾಟ ನಡೆಯಿತು.

ಆದರೆ, ಯಾವುದೇ ಲಾಭ ಮಾತ್ರ ಇವುಗಳಿಂದ ದೊರೆತಂತೆ ತಿಳಿಯಲಿಲ್ಲ.

ತನ್ನ ಸಕಲ ಪ್ರಯತ್ನಗಳೂ ನೀರಲ್ಲಿ ಮಾಡಿದ ಹೋಮವೆನಿಸಿದಾಗ ಮಾನವನು ನಿರಾಶವಾಗುವುದರಲ್ಲಿ ಆಶ್ಚರ್ಯವಿಲ್ಲ. ಸುರೇಶನಾದರೂ ಜುಗುಪ್ಸೆಗೊಂಡು, ವೈದ್ಯರಿಗೆ ಕಾಣಸಿಗದ, ಮಂತ್ರ-ಯಂತ್ರಗಳಿಗೆ ಬಗ್ಗದ, ದೇವರಿಗೆ ಹೆದರದ ರೋಗವಿದು ಯಾವುದು? ಎಂಬ ಯೋಚನೆಯಲ್ಲಿ ಆತ ತಲೆ ಕೆಡಿಸಿಕೊಳ್ಳಲೇ ಬೇಕಾಗಿತ್ತು. ಕೈಹಿಡಿದ ಮಡದಿಯನ್ನು ಕೈಬಿಡುವುದರಲ್ಲಿ ಯಾವ ನ್ಯಾಯವೂ ಇರಲಿಲ್ಲ.

ತನ್ನ ಮನಸ್ಸಿಗೆ ಒಪ್ಪದ ಮಾತು, ಮನಸ್ಸಿನಂತೆ ನಡೆಯದ ವ್ಯಕ್ತಿಗಳ ಕಡೆಗೆ ಮಾನವ ಮೊದಮೊದಲು ತೀರ ಗಮನವೀಯುತ್ತಾನೆ; ಕ್ಷೋಭೆಗೊಳ್ಳುತ್ತಾನೆ; ಹಾಗಿದ್ದರೂ ಸಹನೆಯಿಂದ ವರ್ತಿಸುತ್ತಾನೆ. ಆದರೆ, ಇದು ಪುನರಾವರ್ತನೆಯಾಗುತ್ತ ನಡೆದರೆ, ಆತ ತಾಳ್ಮೆಗೆಡುತ್ತಾನೆ. ಸಾಮಾನ್ಯ ಮನುಷ್ಯನಾದ ಸುರೇಶನಾದರೂ ಇದಕ್ಕೆ ಹೊರತಾದವನಲ್ಲ. ಮೊದಮೊದಲಿಗೆ ಆತ ಹೆಂಡತಿಯ ವಿಲಕ್ಷಣ ವರ್ತನೆಯನ್ನು ಸಹಿಸಿಕೊಳ್ಳುತಿದ್ದ; ಆಕೆಯಲ್ಲಿ ಧೈರ್ಯ ತುಂಬುತಿದ್ದ; ತಾನಿರುವೆನೆಂದು ಅಭಯ ಪ್ರದಾನ ಮಾಡುತಿದ್ದ; ಆದರೆ, ದಿನಗಳೆದಂತೆ, ಆತನಾದರೂ ಮಡದಿಯ ಬಗೆಗೆ ನಿರಾದರ ತೋರಿಸಲೇ ಬೇಕಾಗಿತ್ತು; ಪ್ರಕೃತಿಯ ನಿಯಮವಿದು; ಮಾನವನ ಮನಸ್ಸು!

ಸುರೇಶನಿಗೊಬ್ಬ ಮನೆಯಾಳಿಯನಿದ್ದ, ಕಿಟ್ಟು ಎಂಬಾತ. ವರುಷ ಹದಿನೆರಡು ದಾಟದೆ ಇದ್ದಿದ್ದರೂ ಆತನು ೨೧ರ ತರುಣರ ಕಾರ್ಯಭಾರವೆಲ್ಲವನ್ನೂ ನಿರ್ವಹಿಸುತಿದ್ದ. ಪೋಲಿ ಹುಡುಗರೊಡನೆ ಬೆರೆಯುವುದು, ಅವರೊಡನೆ ತಿರುಗಾಡುವುದು, ಕುಣಿಯುವುದು—ಇದೇ ಅವನ ದಿನಚರ್ಯೆಯಾಗಿತ್ತು. ಹತ್ತು ವರ್ಷಗಳಿಗೆ ಮೊದಲು ಆತನ ತಂದೆ ಸತ್ತು ಹೋಗಿದ್ದ; ಹಿಂದಿನ ವರ್ಷ ತಾಯಿಯೂ ಇಹಲೋಕ ತ್ಯಾಗ ಮಾಡಿದ್ದಳು. ಇದರಿಂದಾಗಿ ಲಗಾಮಿಲ್ಲದ ಕುದುರೆಯೆನಿಸಿದ ಕಿಟ್ಟುವನ್ನು ಸುರೇಶನೇ ರಕ್ಷಿಸಬೇಕಾಯಿತು. ಅನಾಥನಾದ ಕಿಟ್ಟುವನ್ನು ಸರಿದಾರಿಗೆ ತರುವಲ್ಲಿ ಸುರೇಶನಿಗಿಂತಲೂ ಲಲಿತೆ ಪ್ರಯಾಸಪಟ್ಟಿದ್ದಳು. ಹಗಲಿಡಿ ಆಕೆ ಕಿಟ್ಟುವನ್ನು ಮನೆಯಲ್ಲುಳಿಸಲು ಪ್ರಯತ್ನಿಸಿದ್ದಳು. ಆದರೂ

ತಲೆತಪ್ಪಿಸಿ ಓಡುತಿದ್ದ ಕಿಟ್ಟು ಸಂಜೆಯಾಗುತ್ತಲೇ ಮನೆ ಸೇರುತಿದ್ದ. ಸುರೇಶ ಆಫೀಸು ಮುಗಿಸಿ ಬರುವಾಗ ತುಸು ತಡವಾದರೆ, ಆಕೆ ಕಿಟ್ಟು ವನ್ನು ತನ್ನ ಬಳಿಯೇ ಇರಿಸಿಕೊಳ್ಳುತಿದ್ದಳು. ಇದರಿಂದ ಸುರೇಶನಿಗೂ ತುಸು ಸಮಾಧಾನ.

ಒಂದು ದಿನ ಸುರೇಶ-ಲಲಿತೆಯರು ಮಲಗಿದ್ದರು. ಕಿಟ್ಟುವಾದರೂ ಪಕ್ಕದ ಕೋಣೆಯಲ್ಲಿ ನಿದ್ರಿಸಿದ್ದ. ವಿದ್ಯುತ್ತಿನ ದೀಪ ಒಂದೇ ಸಮನೆ ಉರಿಯುತಿತ್ತು. ದೇಹಾಲಸ್ಯಗೊಂಡ ಸುರೇಶ ಅತ್ತಿತ್ತ ಹೊರಳಿದ; ನಿದ್ದೆ ಬರಲಿಲ್ಲ. ದೀಪಕ್ಕೆ ಹಾತೆಗಳು ಮುತ್ತುತಿದ್ದುವು; ಅವುಗಳ ಹಾರಾಟದಲ್ಲಿ ನಿದ್ರೆ ಬೀಳುವುದಾದರೂ ಹೇಗೆ? ಆತ ಲಲಿತೆಯತ್ತ ನೋಡಿದ, ನಿದ್ರೆಯು ಅಮಲು ಹಿಡಿದಿರಬೇಕೆನ್ನಿಸಿತು. ಮೆಲ್ಲನೆ ನಡೆದು ದೀಪದ ಗುಂಡಿಯೊತ್ತಿದ. 'ಟಿಕ್' ಎಂಬ ಶಬ್ದ ಕೇಳುವಷ್ಟರಲ್ಲೇ 'ಅಯ್ಯಯ್ಯೋ' ಎಂಬ ಚೀತ್ಕಾರ ಕೋಣೆಯಲ್ಲಿ ಗಟ್ಟಿಯಾಗಿ ಪ್ರತಿಧ್ವನಿಸಿತು. ಅದೇನೆಂದು ಸುರೇಶ ಯೋಚಿಸುತಿದ್ದನಷ್ಟೇ. ಮಂಚದ ಮೇಲಿಂದ ಯಾರೊ ನೆಲಕ್ಕುರುಳಿದ ಸದ್ದಾಯಿತು, ಅದರ ಜತೆಗೆ 'ಬಂದ,ಬಂದ, ಕುತ್ತಿಗೆ ಹಿಡಿದ; ಬದುಕಿಸಿರಿ ಬದುಕಿಸಿರಿ'- ಎಂಬ ಕೂಗು! ಇದು ಲಲಿತೆಯದೆಂದು ತಿಳಿಯಲು ಆತನಿಗೆ ಹೆಚ್ಚು ಸಮಯ ಹಿಡಿಯಲಿಲ್ಲ. ಕೂಡಲೇ ಗುಂಡಿಯೊತ್ತಿ ದೀಪ ಉರಿಸಿ ಧಾವಿಸಿದ. ಎಲ್ಲವೂ ಒಂದು ಕ್ಷಣದಲ್ಲಿ ನಡೆದು ಹೋಗಿತ್ತು. ಆತ ಲಲಿತೆಯನ್ನೆತ್ತಿ ನೇವರಿಸುತ್ತ ಧೈರ್ಯ ಹೇಳತೊಡಗಿದ

ಸುರೇಶ ಏನೇನೋ ಹೇಳುತ್ತ ಲಲಿತೆಯನ್ನು ಸಮಾಧಾನಗೊಳಿಸುತಿದ್ದ, ಆಗ, "ಏನದು ಗಲಾಟೆ? ಏನಾಯಿತು?" ಎಂದು ಕಿಟ್ಟು ತನ್ನ ಕೋಣೆಯೊಳಗಿನಿಂದ ಬಾಗಿಲು ತೆರೆದು ಹೊರ ಬಂದ.

"ಯಾರೂ ಇಲ್ಲ. ನಾವೇ ನೀನು ಹೋಗಿ ಮಲಗು" ಎಂದು ಗದರಿಸಿದ ಸುರೇಶ.

"ಅಲ್ಲ, ಏನೋ ಕೂಗು ಕೇಳಿಸಿತು. ಏನಾಯಿತು? ಅತ್ತಿಗೆಗೆ ಏನಾಯಿತು?" ಪ್ರಶ್ನಿಸಿದ ಕಿಟ್ಟು.

"ಏನೂ ಆಗಿಲ್ಲ ನೀನು ಹೋಗಿ ಮಲಗು."

"ಏನಾಯಿತು, ಅಂದರೆ?"

"ಏನಾಗಿಲ್ಲ ನಿನ್ನ ದಯ ಹೋಗಿ ಮಲಗುವಷ್ಟು ಉಪಕಾರ ಮಾಡು". . ಸುರೇಶ ಆತನನ್ನು ದೂರ ಕಳಿಸಲು ಪ್ರಯತ್ನಿಸಿದ. ಆದರೆ, ಆತ ಬಿಡಬೇಕೆ? "ಏನಾಯಿತು ಅತ್ತೆ?" ಎಂದು ನೇರವಾಗಿ ಕೇಳಿಯೇ ಬಿಟ್ಟ.

ಕಿಟ್ಟುವಿನ ಒಂದೊಂದು ಪ್ರಶ್ನೆ ಮೊದಲೇ ಕೆಟ್ಟದ್ದ ಸುರೇಶನ ತಾಳ್ಮೆಯನ್ನು ಮತ್ತಷ್ಟು ಕೆಡಿಸುತಿತ್ತು. ಮೊದಲೇ ಸೋತ ಶರೀರ ದಿಂದ ಆತನ ಮನಸ್ಸು ಹತೋಟಿಯಲ್ಲಿರಲಿಲ್ಲ. "ಸುಮ್ಮನೆ ಹೋಗು ಎಂದರೆ...." ಎಂದು ದುರುಗುಟ್ಟಿ ನೋಡಿದ ಮೊದಲೇ ಕೆಂಪಾಗಿದ್ದ ಆತನ ಕಣ್ಣುಗಳೀಗ ಮತ್ತಷ್ಟು ಆರಕ್ತವಾಗಿದ್ದವು.

"ನಿಮ್ಮೊಡನೆ ನಾನು ಕೇಳಲಿಲ್ಲ. ಅತ್ತೆಯೊಡನೆ ಕೇಳಿದೆ. ನೀವೇಕೆ ರೇಗುತ್ತೀರಿ?" ಎಂದ ಆ ಉದ್ದಂಡ ಬಾಲಕ.

ತಾಳ್ಮೆಗೆಟ್ಟ ಸುರೇಶ ಅಳಿಯನ ದವಡೆಗೆರಡು ಬಾರಿಸಿಯೇ ಆತನನ್ನು ಹೊರಗಟ್ಟಬೇಕೆಂದಿದ್ದ. ದೀಪ ಆರಿದಾಗ ಕಂಗೆಟ್ಟು ಅಧೀ ರಳಾಗಿ ಬಿದ್ದು ಬಿಟ್ಟಿದ್ದ ಲಲಿತೆ ಈಗ ತುಸು ಸಮಾಧಾನಗೊಂಡಿದ್ದಳು. "ಪಾಪ, ಅನಾಥ ಹುಡುಗ, ಅವನನ್ನೇಕೆ ಹೊಡೆಯುತ್ತೀರಿ?" ಎಂದು ಆಕೆ ತಡೆದಳು. ಕಿಟ್ಟು ಮೂಕನಾಗಿ ತನ್ನ ಕೋಣೆಯೊಳಕ್ಕೆ ಹೋಗಿ ದಢಾರನೆ ಬಾಗಿಲು ಹಾಕಿಕೊಂಡು ಮಲಗಿದ.

ಇದೇ ಮಾದರಿಯ ಒಂದಲ್ಲ ಒಂದು ದುರ್ಘಟನೆಗಳು ಪದೇ ಪದೇ ನಡೆಯುತಿದ್ದುವು ಒಂದು ದಿನ ಕರೆಂಟ್ ಬಂದಾಯ್ತು. ಲಲಿ ತೆಯು ಕಂಗಾಲಾಗಿ ಅರಚಿಕೊಂಡಳು. ಮೇಂಬತ್ತಿಯನ್ನು ಹಚ್ಚಿದ ನಂತರ ಆಕೆ ಯಥಾಸ್ಥಿತಿಗೆ ಬಂದಳು. ಕಿಟ್ಟು ಕೇಳಿದ; "ಏನದು ಅತ್ತೆ? ಏನಾಯಿತು?"

"ನನಗೆ ಹೆದರಿಕೆಯಾಯಿತು ಮಗು...."

"ಹೆದರಿಕೆ? ಏತಕ್ಕೆ?"

"ಸುತ್ತ ಕತ್ತಲೆ ಹರಡಿತ್ತಲ್ಲ; ಅದರಿಂದಲೇ ನಾನು ಬೆಚ್ಚಿಬಿದ್ದೆ."

"ಅಯ್ಯೋ ಅತ್ತೆ, ಹನ್ನೆರಡು ವರ್ಷದ ನಾನು ರಾತ್ರಿ ಸಹ ನಿರ್ಭಯದಿಂದ ತಿರುಗಾಡಬಲ್ಲೆ, ನೀವು ಮಾತ್ರ...."

"ಹೋಗೋ ಮುಟ್ಠಾಳ....ಹೋಗಿ ಮಲಗುತ್ತಿಯೋ ಇಲ್ಲ...." ಸುರೇಶ ಕೈಯೆತ್ತಿದ.

"ಅಯ್ಯೋ ಪಾಪ, ನಿಮಗೇನು ಆತನನ್ನು ಕಂಡರೆ ಸಿಟ್ಟು? ಆವನನ್ನೇನು ಹೊಡೆದು ಕೊಂದೇ ಬಿಡುತ್ತೀರಾ?" ಲಲಿತೆ ನಡುವೆ ಬಂದಳು.

"ಅವರು ಹಾಗೆಯೇ ಅತ್ತೆ, ನನ್ನನ್ನು ಕಂಡೊಡನೆಯೇ ಹಾವು ಕಂಡ ಗರುಡರಾಗುತ್ತಾರೆ ನೀವಲ್ಲವಾದರೆ, ಇಷ್ಟರಲ್ಲಿ ನಾನೆಲ್ಲಿರುತ್ತಿದ್ದೆನೋ!"

ಸುರೇಶನ ಸಿಟ್ಟು ಇಳಿಯಿತು. ಆತ ಕಿಟ್ಟುವನ್ನು ಸಾಂತ್ವನಗೊಳಿಸಿ ಕಳುಹಿಸಿದ.

ಯಾವ ರೀತಿಯಿಂದಲೂ ಗುಣವಾಗದ ಹೆದರಿಕೆಯ ರೋಗಕ್ಕೆ ಯಾರೊಬ್ಬರೂ ಪರಿಣಾಮಕಾರಿ ಔಷಧಿ ನೀಡಲು ಅಸಮರ್ಥರಾದರು. ಇದರಿಂದ ಸುರೇಶ ಸಂಪೂರ್ಣ ಅಧೀರನಾದ. ತನ್ನ ಪಡೆದು ಬಂದ ಭಾಗ್ಯವಿದು. ಇದಕ್ಕಾಗಿ ಯಾರನ್ನು ದೂರಿಯೇನು ಪ್ರಯೋಜನವೆಂದು ಹಲುಬುತಿದ್ದ. ಮತ್ತೆ ಆತ ಮಾಡಬಹುದಿತ್ತಾದರೂ ಏನನ್ನು?

ಕೆಲವು ಸಮಯ ಕಳೆಯಿತು. ಲಲಿತೆಯ ಪರಿಸ್ಥಿತಿಯೇನೂ ಸುಧಾರಿಸಲಿಲ್ಲ. ಸುರೇಶನಿಗಾದರೂ ಈ ರೋಗ ರಕ್ತಕ್ಕಂಟಿದುದೆಂದು ಖಾತ್ರಿಯಾದುದರಿಂದ ತನ್ನ ಕಳವಳವನ್ನು ಮರೆಯಲು ಯತ್ನಿಸುತಿದ್ದ. ಹಾಗಿರುವಷ್ಟರಲ್ಲಿ ತನ್ನ ಗೆಳೆಯನೊಬ್ಬನ 'ಇದು ಶಾರೀರಿಕ ಇಲ್ಲವೇ ಭೌತಿಕ ರೋಗವಲ್ಲ; ಮಾನಸಿಕವಾದುದು. ಆದುದರಿಂದ ಇದಕ್ಕೆ ಮಾನಸಿಕ ಚಿಕಿತ್ಸೆ ಬೇಕಾಗಿದೆ' ಎಂಬ ಸಲಹೆಯು ಅವನಿಗೆ ಸರಿಕಂಡಿತು. ಅದಕ್ಕಾಗಿ ಪ್ರಸಿದ್ಧ ಮನಶ್ಶಾಸ್ತ್ರಿಯ ಬಳಿಗೆ ಹೋದನಾತ. ಅಲ್ಲಿ ವಿವಾಹಾನಂತರದ ಸಕಲ ವೃತ್ತಾಂತಗಳನ್ನೂ ತಿಳಿಸಿದ, ಮಾನಸಿಕ ತಜ್ಞರು ಹಲವಾರು ಪ್ರಶ್ನೆಗಳನ್ನು ಹಾಕಿ ಉತ್ತರ ಪಡೆದರು. ಇದರಿಂದ ಲಲಿತೆಗೆ ಅಂಟಿರುವುದು ಮಾನಸಿಕ ವ್ಯಾಧಿಯೆಂಬುದು ವೈದ್ಯ

ರಿಗೆ ಖಚಿತವಾಯಿತು. ಅವರು ಪರಿಹಾರವನ್ನು ಸೂಚಿಸಿದರು: "ಇನ್ನು ಮುಂದೆ ಯಾವ ವಿಶೇಷ ಚಿಕಿತ್ಸೆಯೂ ಬೇಡ. ರೋಗಿಯ ಮನಸ್ಸಿನಲ್ಲಿ ಹೆದರಿಕೆ ಹುಟ್ಟಿಕೊಂಡಿದೆ; ಅದನ್ನು ಹೋಗಲಾಡಿಸಬೇಕು".

"ಅದಾವುದರ ಹೆದರಿಕೆ ಡಾಕ್ಟರ್?"

"ಪ್ರಾಯಃ ಆಕೆ ಚಿಕ್ಕವಳಿರುವಾಗ ರಾತ್ರಿ ಹೊತ್ತು ಭೂತಗಳ ಕತೆಗಳನ್ನು ಕೇಳುತ್ತಿರಬೇಕು ಸಾಮಾನ್ಯವಾಗಿ ಮಕ್ಕಳನ್ನು ನಿದ್ರೆ ಬರಿಸಲು ಇಂತಹ ಪ್ರಯತ್ನ ನಡೆಸುತ್ತಾರೆ; ಆ ಭೂತದ ಅಂಜಿಕೆ ಆಕೆಯಲ್ಲಿ ಬೇರೂರಿ ರಕ್ತವೆಲ್ಲ ತುಂಬಿದೆ. ಇದರಿಂದಾಗಿಯೇ ಹಗಲು ಸೀದಾ ಸಾದಾಯಿದ್ದವಳು ಕತ್ತಲು ಹರಡಿದೊಡನೆಯೇ ಹೆದರುತ್ತಾಳೆ."

"ಹಾಗಾದರೆ, ಇದಕ್ಕೆ ಯಾವ ಚಿಕಿತ್ಸೆ ಮಾಡಬೇಕು?"

"ಹೃದಯದಲ್ಲಿ ಬಿದ್ದಿರುವ ಹೆದರಿಕೆಯು ನಿರಾಧಾರವೆಂದು ಮನವರಿಕೆ ಮಾಡಿಕೊಡಬೇಕು."

"ಅದು ಹೇಗೆ?"

"ರಾತ್ರಿ ಮಲಗಿರುವಾಗ, ಒಂದು ಬಾರಿ ದೀಪ ಆರಿಸಿರಿ. ಆಗ, ಆಕೆ ಕೂಗುತ್ತಾಳೆ, ಬೀಳುತ್ತಾಳೆ. ನೀವು ಆಕೆಯನ್ನು ಏನೂ ಇಲ್ಲವೆಂದು ಸಮಾಧಾನ ಹೇಳಬೇಕು. ಆಕೆ ಒಪ್ಪುವುದಿಲ್ಲ. ಬಹುಪರಿಯಾಗಿ ಹೇಳಿದ ನಂತರವೂ ಆಕೆ ಅದಕ್ಕೆ ತಲೆದೂಗುವುದಿಲ್ಲ; ಆ ಮೇಲೆ ದೀಪ ವಿರಿಸಿ ಏನೂ ಇಲ್ಲವೆಂಬುದನ್ನು ತೋರಿಸಿಕೊಡಬೇಕು. ಒಮ್ಮೆ ತನ್ನ ಭಯವು ನಿರಾಧಾರ ಅಪ್ರಾಮಾಣಿಕವೆಂದು ಆಕೆಯ ಮನಸ್ಸಿಗೆ ನಾಟಿತೆಂದರೆ, ಮತ್ತೆ ಅಂತಹ ಪ್ರಸಂಗ ಬರಲಾರದು. ಆಕೆ ಸಂಪೂರ್ಣ ಗುಣ ಮುಖವಾಗುತ್ತಾಳೆ ...ಆದರೆ...ಆದರೆ...."

"ಆದರೆ, ಏನು ಡಾಕ್ಟರ್? ಆಕೆಗಾಗಿ ಏನನ್ನು ಮಾಡುವುದಕ್ಕೂ ನಾನು ಬದ್ಧಕಟಿಯಾಗಿದ್ದೇನೆ."

"ಮತ್ತೇನೂ ಇಲ್ಲ....ಆದರೆ, ಇಷ್ಟಾಗುವಷ್ಟರಲ್ಲಿ ಆಕೆ ಮೃತ್ಯುಮುಖಿಯಾಗುವುದೂ ಸಾಧ್ಯವಿದೆ!"

ಆದಿನ ರಾತ್ರಿ ಸುರೇಶ ಮಲಗಿದಾಗ ತನ್ನ ಮಡದಿಗೆ ಆಕೆಯ ಹೆದರಿಕೆಯ ಕುರಿತು ಉಪದೇಶಿಸಿದ ಅದು ನಿರಾಧಾರವೆಂದು ಆತ

ಸ್ಪಷ್ಟವಾಗಿ ಹೇಳುವಂತಿರಲಿಲ್ಲ. ಆದುದರಿಂದ ಸುತ್ತು ಮಾತಿಗೆ ತೊಡಗುತ್ತ ಹೇಳಿದ: "ನಾನು ಚಿಕ್ಕವನಿರುವಾಗ ನನ್ನ ತಾಯಿ ಮಲಗದಿದ್ದರೆ ಭೂತ ಬಂದು ನಿನ್ನನ್ನು ಹಿಡಿಯುವುದು ಎಂದು ಹೇಳುತಿದ್ದಳು."

"ಬೇಡ, ಬೇಡ. ನನಗೆ ಹೇಳಬೇಡಿ, ಹೇಳ ಬೇಡಿ" ಆಕೆ ಕೂಗತೊಡಗಿದಳು. ದಿಂಬಿನ ಮೇಲೆ ಮುಖವಿಟ್ಟು ಅಳತೊಡಗಿದಳು. ಆಕೆಯ ಇಡಿಯ ಶರೀರ ನಡುಗುತಿತ್ತು. ಸುರೇಶನೆದ್ದು ತನ್ನ ಪತ್ನಿಯ ಬಳಿ ಕುಳಿತು ಪ್ರೇಮ ಭರಿತ ಭಾವದಿಂದ ಶಾಂತಗೊಳಿಸಲೆತ್ನಿಸಿದ. 'ಮೇಣದ ಬತ್ತಿ - ಬೆಂಕಿಪೆಟ್ಟಿಗೆ ಇವೆಯಲ್ಲಾ' ಆಕೆ ಕೇಳಿದಳು "ಹ್ನಾ ಹೆದರಬೇಡ. ನಾನಿಲ್ಲಿಯೇ ನಿನ್ನ ಜೊತೆಗಿದ್ದೇನೆ" ಎಂದ ಆತ ಯೋಚಿಸತೊಡಗಿದ. ಲಲಿತೆ ಭೂತಕ್ಕೆ ಹೆದರುತ್ತಾಳೆಂಬುದರಲ್ಲಿ ಇನ್ನೇನೂ ಸಂಶಯ ಉಳಿಯದಿರಲಿಲ್ಲ. ವೈದ್ಯರೆಂದಿದ್ದರು; "ದೀಪ ನಂದಿಸು, ಪ್ರತಿಕ್ರಿಯೆಯೇನೆಂಬುದನ್ನು ಕಾಣು" ಎಂದು. ಆಕೆ ಬೊಬ್ಬಿಡುವಳೆಂಬುದು ಇದುವರೆಗಿನ ಅನುಭವ.

ಸುರೇಶ ತನ್ನ ಪತ್ನಿಯ ಕಡೆಗೆ ನೋಡಿದ. ದುರ್ಬಲ ಶರೀರದ ನಿಶ್ಶಕ್ತಳು ಹಾಸಿಗೆಯಲ್ಲಿ ಬಿದ್ದುಕೊಂಡಿದ್ದಳು. ಸುರೇಶನಿಗೆ ಏನು ಮಾಡಬೇಕೆಂದು ತೋರಲಿಲ್ಲ. ಅವನ ತಲೆಯೊಳಗೆ ದೊಡ್ಡ ವಿದ್ರೋಹವೊಂದು ನಡೆಯುತಿತ್ತು. ಮೆಲ್ಲನೆ ಗಡಿಯಾರದತ್ತ ದೃಷ್ಟಿ ಹಾಯಿಸಿದ. ಹನ್ನೆರಡು ಬಡಿಯುವುದರಲ್ಲಿತ್ತು. ನಿದ್ರೆಗಾಣದ ಕಣ್ಣು ಅರೆ ಮುಚ್ಚುತಿತ್ತು; ಆತ ಅಂತೆಯೇ ಭಾವ ಸಮಾಧಿಯಲ್ಲಿದ್ದ.

ಅಷ್ಟರಲ್ಲಿಯೇ ರಸ್ತೆಯ ಪಕ್ಕದಲ್ಲೊಂದು ಕರ್ಕಶ ಶಬ್ದ ಕೇಳಿ ಬಂತು. ಕಾರಿಗೆ ಜೋರಾಗಿ ಬ್ರೇಕು ಹಾಕಿದ ಧ್ವನಿಯೂ ಅದರೊಡನೆ ಕೇಳಿಸಿತು. ಸುರೇಶ ಕಂಬಳಿ ಹೊದ್ದು ಪಕ್ಕಕ್ಕೆ ತಿರುಗಿ ಮಲಗಿದ. ದೀಪದ ಬೆಳಕಿನಿಂದ ನಿದ್ರೆ ಬಾರದಿರಲು, ಪ್ರಕಾಶ ಮರೆಮಾಡಲು ಈ ಉಪಾಯ ಹೂಡಿದ್ದ. ಕಂಬಳಿಯಿಂದ ಸೆಖೆ ಹೆಚ್ಚಲು ಉಸಿರು ಕಟ್ಟಿದಂತಾಗಲು ಅದನ್ನು ದೂರವೆಸೆದ. ಅದೇ ಹೊತ್ತಿನಲ್ಲಿ ಕೋಣೆಯ ದೀಪವೂ ನಂದಿತು. ಲಲಿತ ಚೀತ್ಕರಿಸಿದಳು. ಸುರೇಶನೆದ್ದು ಬೆಂಕಿ ಪೆಟ್ಟಿಗೆ ಅರಸತೊಡಗಿದ. ಕತ್ತಲೆಯಲ್ಲಿ ಅದೆಷ್ಟು ಕೈ ಹರಡಿದರೂ

ಪೆಟ್ಟಿಗೆ ಕೈಗೆಟಕಲಿಲ್ಲ. ಲಲಿತೆ ಮತ್ತೂ ಕೂಗಿದಳು. "ಒಳಗೆ ಬರಲು ಬಿಡಬೇಡಿರಿ; ಅದನ್ನು ತಡೆಯಿರಿ; ಕಟ್ಟಿಹಾಕಿರಿ. ಅಯ್ಯೋಯ್ಯೋ.... ನನ್ನಕುತ್ತಿಗೆಯನ್ನು ಅದು ಮುತ್ತಿದೆ..." ಇನ್ನೊಂದೆಡೆ ಭಯಾನಕ ಚೀತ್ಕಾರ!

ಸುರೇಶ ಒಂದೇ ನೆಗೆತಕ್ಕೆ ಆಕೆಯ ಬಳಿ ಬಂದು ಬಿದ್ದ. ಅಷ್ಟರಲ್ಲಿ ದೀಪ ಮರಳಿ ಉರಿಯ ತೊಡಗಿತು. ಇಡಿಯ ಕೋಣೆಯಲ್ಲಿ ಬೆಳಕು ಹರಡಿತ್ತು. ಸುರೇಶನ ಕಣ್ಣುಗಳು ಉರಿದಂತಾದುವು. ಆತ ಕಣ್ಣೊರಸಿಕೊಳ್ಳುತ್ತ ತನ್ನ ಪತ್ನಿಯನ್ನು ವೀಕ್ಷಿಸಿದ ಆಕೆಯ ಮುಖ ವಿವರ್ಣವಾಗಿತ್ತು; ಸ್ತಬ್ಧವಾಗಿತ್ತು, ಕಳಾಹೀನ ವೆನಿಸಿತ್ತು. ಅಷ್ಟರಲ್ಲಿ ಕಿಟ್ಟುವಿನ ಕೋಣೆಯ ಬಾಗಿಲು ತೆರೆಯುವ ಸದ್ದು ಕೇಳಿಸಿತು. ಕಿಟ್ಟು ಬಾಗಿಲಲ್ಲಿ ನಿಂತನು. ಆತನ ಮುಖದಲ್ಲಿ ಗಂಭೀರತೆಯು ತುಂಬಿ ತುಳುಕುತಿತ್ತು. "ನನ್ನಿಂದ ತಪ್ಪಾಯಿತು; ಕ್ಷಮಿಸಿರಿ. ಅತ್ತಿಯೇನು ಹೆದರಿ ಬಿಟ್ಟರೆ? ನಾನೇನೋ ತಮಾಶೆಗೆಂದು ಮೈನ್ ಸ್ವಿಚ್ಚನ್ನು ತೆಗೆದುಬಿಟ್ಟೆ...."ಆತ ಹೇಳಿದ. ನೈಜ ಅಪರಾಧಿಯ ಮನೋಭಾವ ಅವನ ಮುಖದಲ್ಲಿ ಎದ್ದು ತೋರುತಿತ್ತು.

ಲಲಿತೆಯು ಆ ಮೇಲೆ ಕೂಗಲು ಉಳಿಯಲಿಲ್ಲ; ವೈದ್ಯರು ಹೇಳಿದ್ದ ಎರಡನೆಯ ಮಾತು ನಿಜವಾಗಿತ್ತು, ಕಿಟ್ಟು ನಿಜವಾಗಿಯೂ ಅಪರಾಧಿಯೇ ಆಗಿದ್ದ.

## ೧೦ ಭೂತ ಮತ್ತು ವರ್ತಮಾನ

ನೆರೆಮನೆಯ ಮಿತ್ರ ಸುಂದರ ನನಗೆ ರಜೆ ಸಿಗುವುದನ್ನೇ ಕಾಯು ತಿದ್ದ. ಕಳೆದ ಮೂರು ತಿಂಗಳಿಂದಲೂ ಆತನಿಗೆ ಅದೇ ಕೆಲಸ. ಅಂತಹ ಕಾರ್ಯ ನನ್ನಿಂದೇನಾಗ ಬೇಕಿತ್ತು ಎಂದು ನೀವು ಕೇಳಬಹುದು. ಹೌದು ಅದು ಅಷ್ಟು ಮಹತ್ವದ ಕಾರ್ಯವಾದುದರಿಂದಲೇ ಸುಂದರ ತನ್ನ ಸಹ ನಾಶಕ್ತಿಯೆಲ್ಲವನ್ನೂ ಕೇಂದ್ರೀಕರಿಸಿ ನನ್ನ ಶಾಲೆಗೆ ರಜೆ ಯಾವಾಗ ದೊರೆ ಯುವುದೆಂಬುದನ್ನೇ ಒಂಟಿ ಕುತ್ತಿಗೆಯಿಂದ ಎದುರು ನೋಡುತ್ತಿದ್ದ.

ಸುಂದರನಿಗೆ ಒಬ್ಬನೇ ಒಬ್ಬ ಮಗ. ಈಗ ಅವನಿಗೆ ಪ್ರಾಯ ೧೪ರ ಸುಮಾರಿರಬಹುದು. ಆತನಿಗೊಂದು ವಿಚಿತ್ರರೋಗ. ದೈಹಿಕ ವಾಗಿ ಅದು ಗೋಚರಿಸುವುದಿಲ್ಲವಾದರೂ ಆಂತರಿಕ ಅಸ್ವಸ್ಥತೆಯಿಂದ ಸವೆಯುತ್ತ ಬರುತಿದ್ದಾನೆ. ಆತನ ದೇಹ ಸವಕಲಾಗುತ್ತ ಬರುತ್ತಿ ರುವುದನ್ನುಳಿದರೆ ಮತ್ತಾವ ಬಾಹ್ಯ ಚಿಹ್ನೆಯೂ ದೃಗ್ಗೋಚರವಾಗು ವುದಿಲ್ಲ. ಹಳ್ಳಿಯ ಮಾತಿನಲ್ಲಿ ಹೇಳುವುದಾದರೆ, ಆತನಿಗೆ ತಿಂದ ಅನ್ನ ಮೈಗೆ ಹಿಡಿಸುವುದಿಲ್ಲ. ಈ ಕಾಯಿಲೆ ಕಳೆದ ನಾಲ್ಕು ವರ್ಷಗ ಳಿಂದಲೂ ಅಂಟಿಬಿಟ್ಟಿದೆ; ಆತ ಶಾಲೆಗೆ ಹೋಗುತ್ತಾನೆ; ಬರುತ್ತಾನೆ. ಆಟ-ಪಾಟ-ಊಟಗಳೆಲ್ಲವುಗಳಲ್ಲಿಯೂ ಆತನಿಗೆ ಆಸಕ್ತಿ ಇದೆ; ಅವುಗ ಳಲ್ಲಿ ಆತ ನಿಸ್ಸೀಮನೆನ್ನುವಂತಿಲ್ಲವಾದರೂ ಇದ್ದಾನೆ ಎನ್ನಲು ಯಾವ ಅಭ್ಯಂತರವೂ ಇಲ್ಲ.

ಕೃಶನಾಗುತ್ತಿರುವ ಮೋಹದ ಮೋಹನನನ್ನು ಕಂಡು ತಾಯಿ ತುಂಗಮ್ಮ ಚಿಂತನೆಗೆ ಗುರಿಯಾದುದು ಸಹಜ. ಕಳೆದ ನಾಲ್ಕು ವರ್ಷಗಳಲ್ಲಿ ಮೋಹನನನ್ನು ಪರೀಕ್ಷಿಸದ ಹಕೀಮರು ಇಲ್ಲ; ಪಂಡಿ ತರು ನಾಸ್ತಿ; ಡಾಕ್ಟರರುಗಳಿಗೂ ಕೊರತೆಯಿಲ್ಲ. ಸುಂದರ ಹೇಳು ವುದಿತ್ತು: "ನಮ್ಮ ಮೋಹನನನ್ನು ಸರಿಪಡಿಸುವ ಡಾಕ್ಟರುಗಳು ಈ

ಪ್ರಪಂಚದಲ್ಲಿ ಇಲ್ಲ; ಇನ್ನು ಹುಟ್ಟಿ ಕಲಿತು ಬರಬೇಕು" ಎಂದು. ಈ ಉದ್ಗಾರದೊಡನೆ ಹೊರಡುವ ನಿಟ್ಟುಸಿರು ಆತನ ಅವಿಶ್ರಾಂತ ಪ್ರಯತ್ನದಲ್ಲಿ ಒದಗಿದ ನಿರಾಶೆಯನ್ನು ಸೂಚಿಸುವಂತಿತ್ತು. ಇಂತಹ ವೇಳೆಯಲ್ಲಿ ಚಿಕಿತ್ಸೆಯೇ ಇಲ್ಲದ ರೋಗಕ್ಕೆ ಮನ ಔಷಧದಿಂದ ಆದೀತೆಂಬ ವಿಶ್ವಾಸವೂ ಆತನಿಂದ ಹಾರಿಹೋಗಿತ್ತು.

ತುಂಗಮ್ಮ ಮತ್ತಾಕೆಯ ಅತ್ತೆ ರಂಗಮ್ಮನವರು ದೇವ ದೇವರಿಗೆ ಹರಕೆ ಸಲ್ಲಿಸಿದ್ದರು. ತೀರ್ಥಯಾತ್ರೆ ಮಾಡಿ ಬಂದರು. ಇದ್ದ ಬಿದ್ದ ನೀರಲ್ಲಿ ಪುಣ್ಯ ಫಲಪ್ರದವೆಂದು ಮುಳುಗಿದರು; ಪಾದ ಯಾತ್ರೆಮಾಡಿ ಬೆಟ್ಟದ ಮೇಲಿನ ಗುಡಿಗೆ ಸುತ್ತುಬಂದರು. ಎಲ್ಲವೂ ಸಾಂಗವಾಗಿಯೇ ನೆರವೇರಿತು; ಅವರ ಮನಸ್ಸು—ದೇಹಗಳೆರಡೂ ಹಗುರವಾದುವು. ಆದರೇನು, ಮೋಹನನ ಸ್ಥಿತಿ ಮಾತ್ರ ಸರಿಯಾಗಲಿಲ್ಲ.

ಮೋಹನನ ಹಿರಿಯರಿಗೆ ಉಳಿದುದಿನ್ನೊಂದೇ ಮಾರ್ಗ. ತಮ್ಮ ಕರ್ತವ್ಯವನ್ನು ಮಾಡಿದ್ದೇವೆ; ಫಲ ನೀಡುವವ ಭಗವಂತ. ತಮ್ಮ ಪೂರ್ವಜನ್ಮದ ವಿಧಿಯಿಂದಾಗಿ ಹೀಗಾಗುತ್ತಿದೆ. ಇನ್ನೇನು ಮಾಡಲಿದೆ? ದೇವರ ಮೇಲೆ ಭಾರ ಹಾಕಿ ಸುಮ್ಮನಿರುವುದು! ಸ್ಫೂರ್ತಿಗಿದೊಂದು ಸಮಾಧಾನ!!

ಆದಿನ ನಮ್ಮ ಮನೆಗೊಬ್ಬ ಅತಿಥಿಗಳು ಬಂದಿದ್ದರು. ಅವರು ಹಿರಿಯೂರವರು; ಹಿರಿಯ ಆಳು. ವೃತ್ತಿಯಲ್ಲಿ ಜ್ಯೋತಿಷಿಗಳು, ಮಹಾ ಮಂತ್ರವಾದಿಗಳೆಂದು ಹೆಸರು ಪಡೆದವರು. ಊರಲ್ಲಿ ಮಾತ್ರವಲ್ಲ, ಪರವೂರುಗಳಲ್ಲಿಯೂ ಇವರ ಮಂತ್ರ-ತಂತ್ರಶಕ್ತಿಯು ಬೇಕೆಂಬಷ್ಟು ಹರಡಿತ್ತು. ಹಿರಿಯೂರಲ್ಲಿ ಪ್ರತಿನಿತ್ಯವೂ ಅವರನ್ನು ಕಾಣುತಿದ್ದ ನಾನು ಅರೆಕ್ಷಣವೂ ಬಿಡುವಿಲ್ಲದ ಅವರ ದುಡಿತವನ್ನೇ ನೋಡುತ್ತೇನೆ. ದಿನ ನಿತ್ಯವೂ ಸಂಜೆಯ ಬಸ್ಸಿನಲ್ಲಿ ಅವರಿಗೊಂದು ಸೀಟು ಮೀಸಲು. ಮಾರು ದಿನದ ಮೊದಲ ಬಸ್ಸಿನಲ್ಲಿ ಹಾಜರು. ರಾತ್ರಿಯಕಾಲ ಎಲ್ಲೆಲ್ಲಿಯೋ ಯಾವ್ಯಾವ ಊರಲ್ಲೋ ಸಂಚಾರ. ಈ ದಿನ ಅಲ್ಲಿ ಬ್ರಹ್ಮರಾಕ್ಷಸನ ಉಚ್ಚಾಟನೆ, ಇಲ್ಲಿ ಯಕ್ಷಿಣಿಯ ವಶೀಕರಣ, ....ಲ್ಲಿ ಸರ್ವಾರ್ಥಸಿದ್ಧಿ

ಹೋಮ,....ಮೃತ್ಯುಂಜಯ ಜಪ...ಇತ್ಯಾದಿ ಇತ್ಯಾದಿ ಅವರ ಕಾರ್ಯಕ್ರಮ.

ಅಂದು ನಮ್ಮ ನೆರೆಯೂರ ಮನೆಯೊಂದರಲ್ಲಿ ಸಂಚಾರ ಮಾಡುತ್ತಿದ್ದ ಭೂತವನ್ನು ಸೆರೆಹಿಡಿಯಲು ಬಂದಿದ್ದರವರು. ಮಂತ್ರವಾದಿಗಳು ತಮ್ಮ ಮಂತ್ರವಾದಕ್ಕೆ ಗುರಿಯಾದ ಮನೆಯಲ್ಲಿ ಉಳಕೊಳ್ಳುವುದಿಲ್ಲವಂತೆ- ಹಾಗಾಗಿ ನಮ್ಮ ಮನೆ ಬಾಗಿಲಲ್ಲಿ ಅಪರಾತ್ರಿ ಅವರು ಪ್ರತ್ಯಕ್ಷರಾದರು. ಅವರಿಗೆಂದೋ ನೀಡಿದ್ದ ಆಮಂತ್ರಣವನ್ನವರು ಅಂದು ಸ್ವೀಕರಿಸಿದ್ದರು. ಬೆಳಗಾಯಿತು. ಹೊರಡಲು ಎದ್ದ ಅತಿಥಿಯುವರನ್ನು ತಡೆದು ಹೇಳಿದೆ: “ನಮ್ಮೂರ ಪರಿಚಯವನ್ನಾದರೂ ಮಾಡಿಕೊಳ್ಳಿ. ಅಪರೂಪಕ್ಕೆ ಬಂದವರು. ಅಪರಾತ್ರಿ ಬಂದು ಮುಂಜಾವ ಹೊರಟು ಹೋಗುವುದೆಂದರೇನು?”

ಅವರದು ಶಿಸ್ತಿನ ಜೀವನ. ಕೆಲಸವಿಲ್ಲದೆ ಅವರೆಲ್ಲಿಯೂ ಎಂದೂ ತಂಗಿದವರಲ್ಲ ಎಂತಲೇ, “ಇತರ ಕೆಲಸವಿದೆ, ನಾನಿಲ್ಲಿ ಕುಳಿತರೆ, ಅಲ್ಲಿ ಜನರು ಕಾದು ಕಾದು ಮರಳ ಬೇಕಾದೀತು, ಇನ್ನೊಂದು ದಿನ ನೋಡೋಣ" ಎಂದು ಕಂಬಿ ಕಿತ್ತೇ ಬಿಟ್ಟರು. ತುಂಗಮ್ಮನವರು ಎದ್ದು ಅಂಗಳದ ತುಳಸಿಕಟ್ಟೆಗೆ ಸುತ್ತು ಬರುವುದಕ್ಕೂ ಮಂತ್ರವಾದಿಗಳು ಅದೇ ದಾರಿಯಲ್ಲಿ ನಡೆದು ಹೋಗುವುದಕ್ಕೂ ಸರಿಯಾಯ್ತು. ಆ ದಿನ ಮಧ್ಯಾಹ್ನದ ಭೋಜನಾನಂತರ ಸೇರಿದ ಮಹಿಳಾ ಪರಿಷತ್ತಿನಲ್ಲಿ ಮಂತ್ರವಾದಿಯ ವಿಷಯವೂ ಸ್ಫೋಟವಾಯಿತು. ಮಂತ್ರವಾದಿಯೆನ್ನುತ್ತಲೇ ಕಿವಿ'ನೆಟ್ಟಗಾದುದು ಮೊದಲೇ ರಂಗಮ್ಮನಿಗೆ. ಅವರು ಮನಸ್ಸಿನಲ್ಲೇ ಸಂಕಲನ— ವ್ಯವಕಲನ; ಗುಣಾಕಾರ— ಭಾಗಾಹಾರ ಮಾಡಿ ಒಂದು ಉತ್ತರವನ್ನು ಅರಸಿದರು. ಅದನ್ನೇ ಮತ್ತೆ ಮತ್ತೆ ಸರಿ ನೋಡಿದರು. ನೂರು ಬಾರಿಯೂ ಆ ಉತ್ತರವೇ ಸರಿಕಂಡಿತವರಿಗೆ. ರಾತ್ರೆ ಹೊತ್ತು ಸುಂದರ ಬರುತ್ತಲೇ ತನ್ನ ಕಂಡ ಉತ್ತರವನ್ನು ಬಹಿರಂಗ ಮಾಡಿದರು: “ಮೋಹನನಿಗೆ ಯಾವುದೋ ಭೂತ ಹಿಡಿದಿರಬೇಕು; ಅದೇ ಈತ ತಿಂದ ಆಹಾರವನ್ನು ತಾನು ಅರಗಿಸಿಕೊಳ್ಳುತ್ತದೆ. ಆದುದರಿಂದಲೇ ತಿಂದ ಅನ್ನ ಇವನ ಮೈಗೆ ಹತ್ತುವುದಿಲ್ಲ.”

ಇದ್ದರೂ ಇರಬಹುದೆಂದು ಅಂದರು ಉಳಿದವರು. ಇದಕ್ಕಾಗಿ ಭೂತೋಚ್ಚಾಟನೆಯ ಮಹಾಕಾರ್ಯ ನಡೆಯಬೇಕೆಂಬ ಒಮ್ಮತದ ನಿರ್ಧಾರವಾಯಿತು.

ಮಂತ್ರವಾದಿ ಗೆಳೆಯರಲ್ಲಿಗೆ ಸುಂದರನನ್ನು ಕರೆದೊಯ್ದ. ಆತನನ್ನು ಪ್ರಶ್ನಿಸಿ ಪ್ರಶ್ನಿಸಿಯೇ ಅವರು ಸಿದ್ಧಾಂತಕ್ಕೆ ಬಂದರು: "ಮೋಹನ ಹತ್ತು ವರ್ಷದವನಿರುವಾಗ ಶಾಲಾ ಬಾಲಕರೊಂದಿಗೆ ವನವಿಹಾರಕ್ಕೆಂದು ತಿಮ್ಮನ ಗುಡ್ಡೆಗೆ ಹೋಗಿದ್ದ. ಅಲ್ಲಿ ವನ ಭೋಜನವಾಯಿತು. ಆಗ ಭೋಜನದ ಖಾದ್ಯಗಳನ್ನು ಮೆಲ್ಲುತ್ತಿರುವಾಗ ತಿರುಗಾಡುತ್ತಿದ್ದ ಪಿಶಾಚಿಯೊಂದರ ದೃಷ್ಟಿ ಈತನ ಮುಷ್ಟಿಯ ತುತ್ತಿಗೆ ಬಿತ್ತು ಅದು ತತ್‌ಕ್ಷಣ ಆತನ ದೇಹವನ್ನು ಹೊಕ್ಕು ಅಲ್ಲಿಯೇ ನೆಲಸತೊಡಗಿದೆ. ಆದುದರಿಂದ ಮೋಹನ ತಿಂದುದು ಪಿಶಾಚಿಗೆ ಆಹಾರವಾಗುತ್ತದೆಯೇ ಹೊರತು ಈತನ ದೇಹ ಪೋಷಣೆಗೆ ದೊರೆಯುವುದಿಲ್ಲ. ಆದುದರಿಂದ ಮೊದಲಿಗೆ ಈ ಅನಿಷ್ಟ ಪಿಶಾಚಿಯನ್ನು ಉಚ್ಚಾಟನೆ ಮಾಡಿ, ಮತ್ತೆ ಅದು ಪ್ರವೇಶಿಸದಂತೆ ಯಂತ್ರರಕ್ಷೆ ಕಟ್ಟಬೇಕು."

ರಾಜಕಾರಣಿಗಳಿಗಿಂತಲೂ ಮಂತ್ರವಾದಿಗಳ ಸಹವಾಸ ಬಹಳ ಕಷ್ಟ. ಒಮ್ಮೆ ಇವರ ಸ್ನೇಹಾಚಾರಕ್ಕೆ ತೊಡಗಿದರೆ ಮತ್ತೆ ಬಿಡುಗಡೆಯೇ ಇಲ್ಲ. ಚರ್ಮ ವೈದ್ಯರು ಹೇಳುವ ಮಾತೊಂದು ನೆನಪಿಗೆ ಬರುತ್ತದೆ: "ನನ್ನ ರೋಗಿಗಳು ಸದಾಕಾಲ ನನ್ನವರಾಗಿಯೇ ಉಳಿಯುವರು." ಈ ಮಾತು ಮೇಲಿನ ಉಳಿದಿಬ್ಬರ ಬಗೆಯೂ ಅಷ್ಟೇ ಸಹಜ.

ಮೋಹನನಿಗೆ ತಗಲಿದ ಪಿಶಾಚವನ್ನು ಉಚ್ಚಾಟನೆ ಮಾಡಲೆಂದು ಮಂತ್ರವಾದಿಗಳು ಬರಬೇಕಿತ್ತು. ಸುಂದರನಿಗೇನೋ ಭಯ. ಅದಕ್ಕಾಗಿ ಆತ ನನ್ನ ಸಹಾಯವನ್ನು ಬಯಸಿದ್ದ. ಉದ್ಯೋಗವೆಂದಾದ ಮೇಲೆ ನಮಗೆ ಬೇಕಾದಂತೆ ರಜೆ ಸಿಗುತ್ತದೆಯೆ? ಅದಕ್ಕಂದೇ ನನ್ನ ಬೇಸಗೆಯ ರಜಾ ದಿನವನ್ನು ಚಾತಕದಂತೆ ಕಾಯುತ್ತಿದ್ದ ಆತ.

ಆ ದಿನವೂ ಬಂದಿತು. ಪೂರ್ವ ನಿಯೋಜಿತ ಕಾರ್ಯಕ್ರಮದಂತೆ ಅಂದು ರಾತ್ರಿ ಉಚ್ಚಾಟನೆಯ ಕಾರ್ಯ ನಡೆಯಲಿತ್ತು. ಅದಕ್ಕಾಗಿ ಆ ಬೆಳಿಗ್ಗೆಯೇ ಅವರನ್ನು ಕರೆದು ತಂದಿದ್ದೆ. ನಮ್ಮ ಮನೆಯಲ್ಲೇ ಅವರ

ಊಟೋಪಚಾರ ನಡೆದಿತ್ತು. ಸಂಜೆಯ ಹೊತ್ತು ತಿರುಗಾಟಕ್ಕೆಂದು ನಾನು ಅವರನ್ನು ಕೂಡಿ ಹೊರಟೆ. ನಮ್ಮೂರ ಪ್ರಮುಖರ ಮುಖ ಪರಿಚಯ ಮಾಡಿಸುವ ಇಚ್ಛೆ ನನ್ನದಿತ್ತು. ಇದರಿಂದ ನನ್ನ ವ್ಯಕ್ತಿತ್ವಕ್ಕೂ ಕಳೆ ಕಟ್ಟುತ್ತದೆ; ಮಂತ್ರವಾದಿಗಳಿಗೂ ಒಂದು ಬಗೆಯ ಪ್ರಚಾರ ತಾನೆ?

ಊರಿನ ಪಟೇಲರು, ಶ್ಯಾನುಭಾಗರು, ಸಾಹುಕಾರರು, ಜವುಳಿ ವ್ಯಾಪಾರಿಗಳು, ಬ್ಯಾಂಕಿನ ಮೆನೇಜರರು ಎಲ್ಲರನ್ನೂ ಕಂಡಾಯಿತು. ನಮ್ಮ ರಂಗಣ್ಣನನ್ನು ಕಾಣದೆ ಹೋದರೆ, ಇತರರನ್ನು ಕಂಡಂತೆಯೇ ಅಲ್ಲ. ಅದಕ್ಕೆಂದೇ ನಾವು ಅವನ ಮನೆಯತ್ತ ಕಾಲುಕಿತ್ತೆವು.

ರಂಗಣ್ಣ ಚಾವಡಿಯಲ್ಲಿ ಯಾವುದೋ ಒಂದು ದಪ್ಪನೆಯ ಪುಸ್ತಕವನ್ನು ಓದುತ್ತ ಕುಳಿತಿದ್ದ. ನಾವು ಬರುತ್ತಲೇ 'ಬನ್ನಿ ಬನ್ನಿ' ಎಂದು ಪುಸ್ತಕಕ್ಕೆ ಗುರುತು ಹಾಳೆಯಿಟ್ಟು ಅದನ್ನು ಮುಚ್ಚಿ ಎದ್ದು ನಿಂತು, "ಏನಂತೆ, ರಜೆ ಇವತ್ತಿನಿಂದ ಅಲ್ಲವೆ? ಯಾವಾಗ ಬಂದೆ?" ಎಂದು ಪ್ರಶ್ನಿಸಿದ.

"ಇಂದು ಬೆಳಿಗ್ಗೆ ತಾನೇ ಬಂದೆ."

ರಂಗಣ್ಣ ಮಂತ್ರವಾದಿಗಳತ್ತ ದೃಷ್ಟಿ ಹಾಯಿಸಿ ಇವರಾರು ಎನ್ನುವಂತೆ ನನ್ನ ಮುಖ ನೋಡಿದ.

"ಇವರು, ಹಿರಿಯೂರಿನ ಮಹಾ ಮಂತ್ರವಾದಿಗಳು. ಸುಂದರನ ಮಗ ಮೋಹನ ಇದ್ದಾನಲ್ಲಾ, ಅವನ ಮೈಯಿಂದ ಭೂತವನ್ನು ಉಚ್ಚಾಟಿಸಲು ಬಂದಿದ್ದಾರೆ..."

"ಓ ಹೋ ಹೋ, ಹಾಗೋ, ಬನ್ನಿ ಕುಳಿತುಕೊಳ್ಳಿ. ಬಹಳ ಸಂತೋಷವಾಯಿತು, ತಮ್ಮಂಥವರು ನಮ್ಮಲ್ಲಿಗೆ ಪಾದಾರ್ಪಣ ಮಾಡಿದ್ದು; ಕೂತುಕೊಳ್ಳಿ, ಕೂತುಕೊಳ್ಳಿ."

ಬೇಡ ಬೇಡ ಎನ್ನುತ್ತ ಮಂತ್ರವಾದಿಗಳು ಮುಂದಿದ್ದ ಆಸನದಲ್ಲಿ ಮಂಡಿಸಿದರು.

ಉಭಯ ಕುಶಲೋಪರಿ ಸಾಂಪ್ರತವಾದ ಬಳಿಕ ನಾನೆಂದೆ— "ಇವರು ಪ್ರಖ್ಯಾತ ಜ್ಯೋತಿಷಿಗಳು—ಕರೆ—ಮಳೆ—ಬಯಲುಗಳೆಂಬ

ತ್ರಿಲೋಕ ಪ್ರಸಿದ್ಧ ಮಂತ್ರವಾದಿಗಳು. ಇವರು ಹನ್ನೆರಡು ವರ್ಷಗಳ ಮಹಾ ಸಾಧನೆಯಿಂದ ಸಿದ್ಧಿ ಪಡೆದವರು, ಇವರ ಮಂತ್ರ ಶಕ್ತಿಯ ಮುಂದೆ ಯಾವ—ಭೂತ ಪ್ರೇತ, ಪಿಶಾಚಿಯೂ ನಿಲ್ಲಲಮ್ಮದು...."

ರಂಗಣ್ಣನ ಮುಖದಲ್ಲಿ ನಗೆಯ ಮೊನೆ ಮಿನುಗುತಿತ್ತು. ಅವನೆಂದ: "ಇವರನ್ನು ನೋಡುವಾಗಲೇ ಭೂತವೆಂದು ತೋರುತ್ತದೆ. ತಲೆ ಮೇಲೆ ಸವಾರಿ ಮಾಡ ತೊಡಗಿದರೆ, ಅವರ ಇತಿಶ್ರೀಯಾದಂತೆಯೇ ಸರಿ."

ಮಂತ್ರವಾದಿ ಮಿತ್ರರು ಇಂತಹ ಅಪಮಾನವನ್ನು ಸಹಿಸುವುದುಂಟೆ? ರಂಗಣ್ಣನ ಕಪಾಲಕ್ಕೆ ಎರಡು ಬಾರಿಸಿ ಬಿಡುವುದೇ, ತನ್ನ ಮಂತ್ರ ಶಕ್ತಿಯ ಪ್ರಭಾವ ಬೀರುವುದೇ ಎಂದವರು ಯೋಚಿಸುತ್ತಿದ್ದಿರಬಹುದು. ತೀವಿ ಬಂದ ಕೋಪವನ್ನು ನುಂಗಿ ಅವರೆಂದರು: "ಏನು ಮಾತಿದು ಸ್ವಾಮಿ, ನಾನಾಗಿ ಎಲ್ಲಿಗೂ ಹೋಗುವುದಿಲ್ಲ. ಹೇಳುವುದಿಲ್ಲ. ನನ್ನ ಮೇಲಿನ ವಿಶ್ವಾಸದಿಂದ ಜನ ಬರುತ್ತಾರೆ; ನಾನೂ ಅವರೊಡನೆ ವಿಶ್ವಾಸದಿಂದ ನಡೆಯುತ್ತೇನೆ."

"ವಿಶ್ವಾಸದ ಹೆಸರಿನಲ್ಲಿ ನೀವು ಜನರನ್ನೇಕೆ ವಂಚಿಸುತ್ತೀರಿ?"

"ನೀವೇಕೆ ನನ್ನ ಮೇಲೆ ಕೋಪಿಸುತ್ತೀರಿ? ವಿಶ್ವಾಸೋ ಫಲದಾಯಕ. ಅಷ್ಟೆ ಯಾರು ಯಾರಲ್ಲಿ ಯಾವ ಬಗೆಯಲ್ಲಿ ವಿಶ್ವಾಸವಿಡುತ್ತಾರೆಯೋ ಅವರಿಗೆ ಆ ಬಗೆಯ ಫಲ ಸಿಗಿಯೇ ಸಿಗುತ್ತದೆ. ಇದು ಸ್ವಯಂ ಗೀತಾಚಾರ್ಯನ ಉಕ್ತಿ. ಯಾವುದು ಸುಳ್ಳಾದರೂ ಗೀತೆ ಸುಳ್ಳಲ್ಲ ಅದು ಪರಮಾತ್ಮನ ಮುಖದಿಂದಲೇ ಹೊರ ಬಿದ್ದದ್ದು; ವ್ಯಾಸ ಮಹರ್ಷಿಗಳಿಂದ ಲಿಖಿತವಾದದ್ದು...."

"ಅದು ಸರಿಯೆನ್ನಿ, ನಿಮ್ಮ ವಿಶ್ವಾಸದ ಮಾತನ್ನು ನಾನು ಅಲ್ಲಗಳೆಯುತ್ತಿಲ್ಲ. ಎಲ್ಲರಲ್ಲಿಯೂ ವಿಶ್ವಾಸವಿಡಬೇಕು."

"ಹಾಗೆಯೇ ನೋಡಿ, ಜನ ನನ್ನಲ್ಲಿ ವಿಶ್ವಾಸವಿಟ್ಟದೆ. ಜನರ ಸಂಕಟಗಳು ಮತ್ತಾವ ರೀತಿಯುಲ್ಲೂ ಗುಣವಾಗದಾಗ, ಮಂತ್ರವಾದದ ಆಶ್ರಯ ಪಡೆಯುತ್ತಾರೆ. ಸತ್ಯವಾಗಿಯೋ ಕಾಕತಾಳೀಯವಾಗಿಯೋ

ಅದು ಗುಣಮುಖವಾಗುತ್ತದೆಯೆನ್ನಿ. ಆಗ ಜನರು ಆದನ್ನು ನಂಬಿದರೆ ಅದರಲ್ಲಿ ನನ್ನ ತಪ್ಪೇನು?"

"ನೀವು ಮಂತ್ರವಾದವನ್ನು ಪೂರ್ಣ ಅಭ್ಯಸಿಸಿದ್ದೀರಾ?"

"ಗುರು ಮುಖದಿಂದ ಕಲಿತುಕೊಳ್ಳಬಹುದಾದುದನ್ನು ಅರಿತು ಕೊಂಡಿದ್ದೇನೆ. ಅವುಗಳನ್ನು ವ್ಯವಹಾರಕ್ಕೂ ತರುತಿದ್ದೇನೆ."

"ನೀವು ಯಶಸ್ವಿಯಾಗಿದ್ದೀರಾ?"

"ಏನನ್ನುತ್ತಿ ರಂಗಣ್ಣ, ಊರಿಗೆ ಊರೇ ಇವರಿಂದ ಉಪಕೃತವಾಗಿದೆ. ಇವರ ಹೆಸರು, ಕೀರ್ತಿಯೆಲ್ಲಾ ಹರಡಿರುವಾಗ...."

"ಏನೋ ನಿಮ್ಮಂತಹರ ವಿಶ್ವಾಸ..."

ರಂಗಣ್ಣ ಗೊಳ್ಳನೆ ನಕ್ಕ. ಹೇಳಿ ಕೇಳಿ ರಂಗಣ್ಣ ಆಧುನಿಕ ವಿಜ್ಞಾನವಾದಿ. ಆತನಿಗೆ ಜ್ಯೋತಿಷ್ಯ, ಮಂತ್ರ, ತಂತ್ರವೆಂದರಾಗದು. ಈಗ ಅದು ಮತ್ತಷ್ಟು ಸಿದ್ಧವಾಯಿತು. ಮನೆಗೆ ಬಂದ ಅತಿಥಿಗಳನ್ನು ಇಲ್ಲಿ ಕರೆದು ತಂದುದೇ ತಪ್ಪು ಎಂದೆನ್ನಿಸಿತು ನನಗೆ. ಇನ್ನೂ ಅವರನ್ನು ಇರಗೊಳಿಸಿದರೆ, ಸುಮ್ಮನೆ ಅಪಮಾನವೆಂದು ಹೊರಡುವುದರಲ್ಲಿದ್ದೆ. ನಾನೆಂದೆ: "ಉಚ್ಚಾಟನೆಯು ತಯಾರಿಯಾಗಬೇಕು ನಾವಿನ್ನು ಬರುತ್ತೇವೆ." ಮಂತ್ರವಾದಿಗಳೂ ಹೌದೆನ್ನುವಂತೆ ತಲೆದೂಗಿದರು.

ರಂಗಣ್ಣನೆಂದ: "ಏನಪ್ಪ, ಉಚ್ಚಾಟನೆ ಮಾಡುವವರು ಇವರು ತಾನೆ? ಹೋಗಲಿ ಬೇಕಾದರೆ. ನಿನಗೇನು ಅಲ್ಲಿ ಕೆಲಸ? ಬಹಳ ಅಪರೂಪವಾಗಿ ಬಂದಿದ್ದೀಯಾ..."

ಅವಕಾಶವರಸುತಿದ್ದ ಜ್ಯೋತಿಷಿಗಳು "ಸರಿ, ಸರಿ. ನಾನು ಮುಂದೆ ಹೋಗುತ್ತೇನೆ. ನೀವು ಮಾತಾಡಿಕೊಳ್ಳಿ. ನಮಸ್ಕಾರ." ಎಂದು ಹೊರಟೇಬಿಟ್ಟರು.

ಅವರು ನಿರ್ಗಮಿಸಿದ ಬಳಿಕ ರಂಗಣ್ಣ ಗಟ್ಟಿಯಾಗಿ ಕೂಗಾಡಿದ: "ಮೋಸಗಾರರು, ಶುದ್ಧ ವಂಚಕರು. ಅಪ್ಪಟ ದೇಶ ದ್ರೋಹಿಗಳು!"

"ಯಾಕೆ ಹಾಗೆನ್ನುತ್ತೀಯ? ಇವರು ಇದುವರೆಗೆ ಅನೇಕರ ದೇಹ ಹೊಕ್ಕ ಭೂತ ಪ್ರೇತ ಪಿಶಾಚಿಗಳನ್ನು ಬಿಡಿಸಿ ಆರೋಗ್ಯ ತಂದಿತ್ತಿ

ದ್ದಾರೆ, ಈಗ, ಮೋಹನನ ಶರೀರದಲ್ಲೂ ಪಿಶಾಚಿ ಹೊಕ್ಕಿದೆಯೆಂದು ತಿಳಿದು ಅದರ ಉಚ್ಚಾಟನೆಗೆ ಹೊರಟಿದ್ದಾರೆ"

"ಮೋಹನನಿಗೇನೆ?" ಪ್ರಶ್ನಿಸಿದ ರಂಗಣ್ಣ ಕೇಳಿದ: "ಅವನಿಗೆ ಖಾಯಿಲೆಯೂದರೂ ಏನಂತೆ?"

"ರೋಗವೇನು? ಯಾವ ವೈದ್ಯರಿಂದಲೂ ಕಂಡು ಹಿಡಿಯಲಾಗ ಲಿಲ್ಲ. ತಿಂದ ಅನ್ನ ಮೈಗೆ ಹಿಡಿಯುವುದಿಲ್ಲ. ಈತ ತಿಂದುದನ್ನು ಪಿಶಾಚಿ ತಿನ್ನುತ್ತದೇಂತ...."

ರಂಗಣ್ಣ ಮತ್ತೂ ನಗ ತೊಡಗಿದ. "ಎಂತಹ ಹುಚ್ಚನಪ್ಪ ನೀನು? ತಿನ್ನ ಬೇಕಾದರೆ ಪಿಶಾಚಿಗಳು ದೇಹದೊಳಗೆ ಹೋಗ ಬೇಕೆ? ಏನೋ ಲಿವರ್ ಸರಿಯಾಗಿ ಕೆಲಸ ಮಾಡುತ್ತಿಲ್ಲ; ಅದು ಎಕ್ಸ್‌ರೇಗೂ ನಿಲುಕುವುದಿಲ್ಲ, ಹುಳಗಳ ಉಪದ್ರ ಹೆಚ್ಚಿರಬಹುದು; ಒಬ್ಬನೇ ಮಗ ನೆಂಬ ಮೋಕೆಯಿಂದ ಅಲ್ಲಸಲ್ಲದ ತಿಂಡಿ ತಿನಸುಗಳನ್ನು ತಿನ್ನಿಸಿದ್ದರ ಫಲ ಇರಬಹುದು .ಹಾಗಿರುವಾಗ ಪಿಶಾಚಿ ಹೊಕ್ಕರೆ ಆಶ್ಚರ್ಯವೇನು?

"ರಂಗಣ್ಣ, ನಿನಗೆ ಎಲ್ಲೆಲ್ಲಿಯೂ ತಮಾಷೆಯೇ ಹೊಳೆಯುತ್ತದೆ. ಹುಟ್ಟಿದರೂ ನಗೆ; ಸತ್ತರೂ ನಗೆ..."

"ಇದು ವಿನೋದವಲ್ಲದೆ ಮತ್ತೇನು? ಪಿಶಾಚಿಗೆ ಶರೀರವಿರುವು ದಿಲ್ಲ. ಬಾಲಕ, ನಾರಿ, ವೃದ್ಧರೆಂದರೆ ಅದಕ್ಕೆ ಮಮತೆ ಹೆಚ್ಚು. ಬಡ ವರನ್ನು ಕಂಡರೆ, ಅವರ ತಲೆಯೇರಿ ತಿರುಗಿಸುತ್ತದೆ; ಉಳಿದವರಿಗೆ ಉಪ ದ್ರವ ಸೀಡುತ್ತದೆ. ಆಳಿಯ ದೇವರಿಗಿಂತಲೂ ದೊಡ್ಡ ದೇವರಾಗಿ ಬಿಡು ತ್ತದೆ. ಅದು."

"ನಿನಗೆ ಭೂತದಲ್ಲಿ ವಿಶ್ವಾಸವಿಲ್ಲವೆಂದು ನನಗೆ ಗೊತ್ತು ರಂಗಣ್ಣ..."

"ಅರರೆ, ಏನನ್ನುತ್ತೀಯಾ ನೀನು? ನನಗೆ ಭೂತ, ಭವಿಷ್ಯ ಹಾಗೂ ವರ್ತಮಾನಗಳಲ್ಲಿ ಪೂರ್ತಿ ವಿಶ್ವಾಸವಿದೆ, ಪೂರ್ಣ ಭೂತ, ಸಾಮಾನ್ಯ ಭೂತ, ನಿರಂತರ ಭೂತ...."

"ಇದೇನು ರಂಗಣ್ಣ? ನಾನೆನ್ನುವ ಭೂತ ಅದಲ್ಲ."

"ಮತ್ತಾವ ಭೂತ ಅದು?"

"ಜನರ ಮೈ ಮೇಲೆ ಎರಗುತ್ತದೆ ನೋಡು, ಆ ಭೂತ."

ರಂಗಣ್ಣ ತುಸು ಹೊತ್ತು ಯೋಚಿಸಿ ಹೇಳಿದ: "ಆ ಭೂತ.... ಸರಿ, ಅದನ್ನೂ ಒಪ್ಪುತ್ತೇನೆ. ನಮ್ಮೆಲ್ಲರ ತಲೆಯ ಮೇಲೆ ಭೂತವು ಸವಾರಿ ಮಾಡ ಹತ್ತಿದೆ."

"ರಂಗಣ್ಣ, ನೀನು ವ್ಯಂಗ್ಯ ಮಾತಾಡುತ್ತಿ. ಆದರೆ, ಪದ್ಮ ಪುರಾಣವನ್ನು ನೋಡು, ಅದರಲ್ಲಿ ಅದೆಷ್ಟು ಬಗೆಯ ಭೂತಗಳನ್ನು ವರ್ಣಿಸಿದ್ದಾರೆ ಗೊತ್ತೇ ನಿನಗೆ?"

"ಅದೇ ಭೂತ ನಿನ್ನ ಮಸ್ತಕದಲ್ಲಿ ವಿಚರಿಸುತ್ತ ವಚಿಸುತ್ತಿದೆ. ದೊಡ್ಡ ಉದ್ದಾಮ ಪಂಡಿತರ ತಲೆಯಲ್ಲಿದೆ ಈ ಭೂತ. ಅವರನ್ನು ಏನು ಕೇಳಿದರೂ ಹೇಳುತ್ತಾರೆ—ಅಗ್ನಿ ಪುರಾಣದಲ್ಲಿ ಹೀಗೆ ಹೇಳಿದೆ, ಪದ್ಮ ಪುರಾಣ ಹಾಗೆ ಹೇಳುತ್ತದೆ, ಗರುಡ ಪುರಾಣ ಹೀಗೆ ಸಾರಿದೆ, ಭಗವದ್ಗೀತೆಯಲ್ಲಿ ಹೇಳಿದ್ದಾನೆ....ಇದನ್ನು ಬಿಟ್ಟು ನೀವು ಏನು ಹೇಳುತ್ತೀರಿ ಎಂದು ಕೇಳಿದರೆ, ಮೌನಂ ಪಂಡಿತ ಲಕ್ಷಣಂ ಎಂದು ಸುಮ್ಮನಿರುತ್ತಾರೆ. ಅತ್ತ ವಿಶ್ವದಲ್ಲಿ ನವನವ ಆವಿಷ್ಕಾರಗಳು ನಡೆಯುತ್ತಿರುತ್ತವೆ. ನಮ್ಮ ಕಣ್ಣುಗಳ ಮುಂದೆ ಪುರಾಣ ಪರದೆಯು ಅಡ್ಡ ನಿಂತಿದೆ."

ನನ್ನಿಂದ ತಡೆಯಲಾಗಲಿಲ್ಲ. ಅದಕ್ಕೆಂದೇ ಹೇಳಿದೆ: "ಏನನ್ನುತ್ತಿ ರಂಗಣ್ಣ? ಒಂದು ಕಾಲದಲ್ಲಿ ನಮ್ಮ ದೇಶದಲ್ಲಿಯೂ ವಿಜ್ಞಾನವು ಉಚ್ಚಾಪ್ರಯಾವಸ್ಥೆಗೇರಿತ್ತು. ರಾಮಾಯಣದ ಕಾಲದಲ್ಲಿಯೇ ನಮ್ಮಲ್ಲಿ ಪುಷ್ಪಕ ವಿಮಾನವಿತ್ತು; ಅಗ್ನಿ ಬಾಣವಿತ್ತು...."

ಅರ್ಧದಲ್ಲೇ ತಡೆದು ರಂಗಣ್ಣ ನುಡಿದ: "ಮತ್ತೆ ಸುರು ಮಾಡಿದೆ. ಭೂತದ ವರ್ಣನೆಗೆ. ಆನೆ ಸತ್ತು ಹೋಯ್ತು; ಲಾಯ ಬಿದ್ದುಹೋಯ್ತು, ಆದರೂ ಅಂಕುಶ ಮಸೆದು ಕೈಯಲ್ಲಿ ಹಿಡಿದು ಕೊಂಡಿದ್ದೇವೆ. ಒಂದು ದಿನ ನಮ್ಮಲ್ಲಿಯೂ ಆನೆಯಿತ್ತು ಎಂದು ಸಾರುತ್ತೇವೆ. ಇದ್ದಾಗ ಇದ್ದಿತ್ತು ನಿಜ. ಯಾರು ಇಲ್ಲವೆನ್ನುತ್ತಾರೆ? ಆದರೆ, ಇಂದೇನು ಇದೆ ನಮ್ಮಲ್ಲಿ? ಮುಳ್ಳಿನ ಮೇಲೆ ಮಲಗಿ ಬಂಗಾರದ ಕನಸನ್ನು ಕಂಡರೆ ಲಾಭವೇನು? ಹಗ್ಗ ಸುಟ್ಟು ಹೋಯಿತು; ಬೂದಿಯೂ ಹಾರಿ ಹೋಗ ತೊಡ

ಗಿದೆ. ಒಂದು ಕಾಲವಿತ್ತು ನೋಡು, ನಮ್ಮ ದೇಶದ ಕೀರ್ತಿ ವೈಭವ ಗಳು ಹಿಮಾಲಯದ ಗಿರಿ ಶೃಂಗಗಳನ್ನೂ ಏರಿ ಹೋಗಿತ್ತು—ನಾವಿಂದು ಹೊಂಡದಲ್ಲಿ ಬಿದ್ದು ಇದನ್ನು ಆಡುತ್ತೇವೆ. ಅಂದು ನಮ್ಮವರು ಹಾಗಿ ದ್ದರು ಹೀಗಿದ್ದರು ಎಂದು ಹೆಮ್ಮೆ ಪಡುತ್ತೇವೆ. ಹಿಮಾಲಯವನ್ನೂ ಮೀರಿ ಹರಡಿದ ದೇಶ ಹಿಮಾಲಯವನ್ನು ಮಾತ್ರವಲ್ಲ, ಅದರ ದಕ್ಷಿಣ ಭೂಭಾಗವನ್ನೂ ಕಳೆದುಕೊಳ್ಳುತ್ತಿದೆ. ಇತರ ದೇಶಗಳು ಭವಿಷ್ಯದ ಕಡೆಗೆ ನೋಡಿದರೆ, ನಾವು ಮಾತ್ರ ಭೂತದ ಬೆನ್ನ ಹಿಂದೆಯೇ ನಡೆಯು ತ್ತೇವೆ; ಮುಂದೆ ನೋಡುವುದೇ ಇಲ್ಲ."

"ರಂಗಣ್ಣಾ, ನಿನಗೆ ಭೂತ—ಪ್ರೇತಗಳಲ್ಲಿ ವಿಶ್ವಾಸವಿಲ್ಲ. ಬಿಡು. ಆದರೆ, ನೋಡು, ಕೆಲವರ ಕಣ್ಣುಗಳಿಗೆ ಭೂತ ಕಾಣುತ್ತದೆ, ಕೆಲವರ ನ್ನದು ಹಿಂಬಾಲಿಸುತ್ತದೆ—ಇದೆಲ್ಲಾ ಹೇಗೆ? ಅದೂ ಅಲ್ಲದೆ ಸಾವಿರಾರು ವರ್ಷಗಳಿಂದ ನಡೆದು ಬಂದ ಈ ಬಗೆಯ ವಿಶ್ವಾಸವನ್ನು ಇಲ್ಲವೆನ್ನುವ ಸಾಹಸ ಮಾಡುವುದಾದರೂ ಸಾಧ್ಯವೆ?"

"ಅದೆಲ್ಲಾ ಹೆದರಿಕೆಯ ಭೂತ. ಮೂರ್ಖತೆಯ ಪರಿಣಾಮ ವದು. ರಾತ್ರಿಯ ಹೊತ್ತು ನಯನಮನೋಹರವಾದ ಉದ್ಯಾನದಲ್ಲಿ ಕಳ್ಳನೋ ಕೊರಮನೋ ಕಾಣಿಸಿಕೊಂಡರೆ, ಭೂತವೆಂದು ನಂಬಿ ಗಾ ಯತ್ರಿ ಜಪಿಸಲು ತೊಡಗುತ್ತಾರೆ, ರಾತ್ರಿ ಸಂಚರಿಸುವವರು ಯಕ್ಷಿಣಿ ಯರಾಗುತ್ತಾರೆ. ಶಿರೋಭ್ರಮಣೆಯಿಂದ ಯಾರಾದರೂ ಏನಾದರೂ ಆಡಿಕೊಂಡರೆ, ಅದು ಭೂತದ ಮಾತಾಗುತ್ತದೆ. ದಾರಿಹೋಕರು ಕಲ್ಲುಗಟ್ಟಿಗಳನ್ನು ಮಾಡಿಗೆಸೆದರೆ, ಅದು ಭೂತೋಪದ್ರವವಾಗುತ್ತದೆ. ರಾತ್ರಿಯಲ್ಲಿ ಮಿಂಚುಹುಳ ಮಿನುಗಿದರೆ ಅದು ಕೊಳ್ಳಿದೆವ್ವ! ಹಾವು ಕಾಣಿಸದಿದ್ದರೆ ಭೂತ ಸರ್ಪ. ಚೇಂಕಿ ಹೇಗೆ ತಗಲಿತೆಂದು ತಿಳಿಯದೆ ಹೋದರೆ, ಅದು ಭೂತದ ಕಾರಬಾರ. ಇದೆಲ್ಲಾ ಅವಿದ್ಯೆಯ ಅಂಧ ಕಾರದ ಪರಿಣಾಮವಲ್ಲದೆ ಮತ್ತೇನು?"

"ನಿನಗೆ ಅಲೌಕಿಕ ವಿಚಾರಗಳಲ್ಲಿ ವಿಶ್ವಾಸವಿಲ್ಲವೆಂದು ಈಗ ನನಗೆ ಸ್ಪಷ್ಟವಾಯಿತು. ಆದರೂ ನೋಡು. ಇಂದಿಗೂ ನಮ್ಮ ದೇಶದಲ್ಲಿ ಎಂತೆಂತಹ ಮಂತ್ರವಾದಿಗಳಿದ್ದಾರೆ! ಕರ್ಣ ಪಿಶಾಚಿಯನ್ನು ವಶೀಕರಿಸಿ

ಗತಕಾಲದ ಸಂಗತಿಗಳನ್ನು ಅರಿತುಕೊಳ್ಳುತ್ತಾರೆ. ಕವಡೆಗಳನ್ನು ಎಸೆದು ಮನಾಶಯವನ್ನು ಸುರುತ್ತಾರೆ. ಬೇತಾಳಾದಿಗಳನ್ನು ದಾಸರನ್ನಾಗಿಸಿ ಬೇಕಾದ್ದನ್ನು ಪಡೆಯುತ್ತಾರೆ ಮಂತ್ರ ಸಹಾಯದಿಂದ ಮಾರಣ ಉಚ್ಚಾಟರಣ, ವಶೀಕರಣವೆಲ್ಲವನ್ನೂ ಮಾಡುತ್ತಾರೆ."

"ಹಸಿ ಹಸಿ ಸುಳ್ಳು! ನೀನನ್ನುವುದರಲ್ಲಿ ಎಳ್ಳಷ್ಟಾದರೂ ಸತ್ಯವಿರುವುದಾದರೆ ನಾನು ಎಲ್ಲೆಡೆಯಲ್ಲಿಯೂ ಡಂಗುರ ಹೊಡಿಸುತ್ತೇನೆ. ಅದು ನಿಜವೆಂದಾದರೆ ಔಷಧಿಗಳಿಗೆಂದು ಸಾವಿರಾರು ಕೋಟಿ ರೂಪಾಯಿ ಇಂದು ವಿದೇಶಗಳಿಗೆ ಹೋಗುತ್ತಿದೆ; ಅದು ಉಳಿಯುತ್ತದೆ. ನಮ್ಮ ಸರಕಾರ ಪೋಲೀಸ್ ವಿಭಾಗವನ್ನೇ ನಿಲ್ಲಿಸಿ, ಅದರ ಬದಲು ಪ್ರಶ್ನ ಮಾರ್ಗ ಬಲ್ಲ ಕೆಲವರನ್ನು ನೇಮಿಸಬಹುದು. ನೀರಾವರಿ ಮಂತ್ರಿಗಳು ಮಂತ್ರ ಬಲದಿಂದಲೇ ಗದ್ದೆಗಳಿಗೆ ನೀರೆರೆಯಬಹುದು. ಸೋಂಕು ರೋಗಗಳು ಹರಡಿದಾಗ ಮೃತ್ಯುಂಜಯ ಹೋಮ ಮತ್ತು ಜಪವನ್ನು ತಾಲೂಕು ಬೋರ್ಡುಗಳು ಮಾಡುತ್ತಿರಬಹುದು. ಪ್ರಧಾನ ಮಂತ್ರಿಯವರು ರೇಡಿಯೋವಿನ ಬದಲು ಒಂದು ಕರ್ಣ ಪಿಶಾಚಿಯನ್ನೇ ಬಳಿಯಿಟ್ಟುಕೊಳ್ಳಬಹುದು. ಸಂರಕ್ಷಣಾ ಮಂತ್ರಿಯವರು ಶತ್ರು ಪಲಾಯನ ಜಪ ಶಾಲೆಯನ್ನು ನಿರ್ಮಿಸಿ ಚೀನೀಯರನ್ನು ಓಡಿಸಬಹುದು. ರಾಜ್ಯ ನೀತಿಯಿಂದ ನಡೆಯದ ಕಾರ್ಯಗಳು ಮಂತ್ರ ನೀತಿಯಿಂದ ಸಫಲವಾಗುತಿದ್ದುವು. ಸೇನೆಗಾಗಿ ನಡೆಯುವ ವೆಚ್ಚವೆಲ್ಲ ಉಳಿಯುತಿತ್ತು. ಒಂದು ದೇಶದ ಸೇನೆಗಳು ಆಕ್ರಮಣ ಮಾಡಿದರೆ, ಒಬ್ಬ ತಂತ್ರವಾದಿಯನ್ನು ಕಳಿಸಬಹುದಿತ್ತು. ಆತನು ತನ್ನ ತಂತ್ರ ವಿದ್ಯಾಕೌಶಲದಿಂದ ಸೇನೆಗಳು ಮುಂದುವರಿಯದಂತೆ ಸಂಮೋಹನಗೊಳಿಸುತಿದ್ದನು; ಅಥವಾ ವಶೀಕರಣದ ಬಲದಿಂದ ನಮ್ಮ ಕಾಲಡಿಗೆರಗುವಂತೆಸಗುತಿದ್ದನು. ಇವೆಲ್ಲಾ ದೊಡ್ಡ ಕೆಲಸವಾಯಿತು ಒಂದು ಸಾಮಾನ್ಯವಾದುದನ್ನೂ ಹೇಳುತ್ತೇನೆ. ನಮ್ಮ ದೇಶದ ತಂತ್ರಜ್ಞನಿಗೆ ತನ್ನ ವಿದ್ಯೆಯ ಬಗೆಗೆ ಅಭಿಮಾನವಿರುವುದಾದರೆ, ವರನ ತಂದೆಯನ್ನು ಸಮಾಧಾನ ಪಡಿಸಿ, ವರದಕ್ಷಿಣೆಯಿಲ್ಲದಂತೆ ಮದುವೆ ನಡೆಯುವಂತೆ ಮಾಡಲಿ ಇದರಿಂದ ಲೋಕಕ್ಕಾದರೂ ಕಲ್ಯಾಣವಾದೀತು. ನಮ್ಮಲ್ಲಿ ನೀನೆನ್ನುವಂತೆ

ಮಹಾ ಮಹಾ ಮಂತ್ರಜ್ಞರೂ ತಂತ್ರಜ್ಞರೂ ಇರುವುದು ನಿಜವೆಂದಾದರೆ, ನಾವು ಕಳೆದ ನೂರಿನ್ನೂರು ವರ್ಷಗಳ ಕಾಲ ಪರಾಧೀನತೆಯಲ್ಲಿ ಏಕೆ ಇರುತಿದ್ದೆವು?"—ರಂಗಣ್ಣನ ವಾಗ್ಜಾಲ ನಿರಂತರವಾಗಿ ಸಾಗುತ್ತಿತ್ತು.

ರಂಗಣ್ಣನ ಗಮನವನ್ನು ಬೇರೆಡೆಗೆ ಸರಿಸುವ ಪ್ರಯತ್ನ ಮಾಡುತ್ತ ನಾನೆಂದೆ, "ರಂಗಣ್ಣಾ, ನೀನು ಎಷ್ಟೇ ಹೇಳು. ಮಂತ್ರತಂತ್ರಗಳು ಸುಳ್ಳು ಎಂದು ನನಗನಿಸುವುದಿಲ್ಲ. ನಾನು ಈ ಮಂತ್ರವಾದಿಗಳ ಮನೆಯನ್ನು ಪ್ರತಿನಿತ್ಯ ನೋಡುತ್ತೇನೆ. ಅಲ್ಲಿ ಸಂತೆಯು ನೆರವಿಯೇ ಸೇರುತ್ತದೆ. ಅದು ನೀನೆನ್ನುವಂತೆ ಸುಳ್ಳು—ವಂಚನೆ—ಮೋಸ ಎಂದಾದ ಪಕ್ಷದಲ್ಲಿ ಮತ್ತೂ ಮತ್ತೂ ಅದೇಕೆ ಜನರು ಬರುತ್ತಾರೆ? ಆತನೆಂದಂತೆ ಏಕೆ ನಡೆದುಕೊಳ್ಳುತ್ತಾರೆ? ನೋಡು, ಇವತ್ತು ರಾತ್ರೆಗೆ ಮೋಹನನ ಮೈಯೊಳಗಿನ ಪಿಶಾಚಿಮೋಡಿಸಲು ಸಾಸಿವೆ, ಕಪ್ಪು ಕಡಸಿನ ಸೆಗಣಿ, ಕರಿ ಕಿವಿಯ ಕುದುರೆಯ ಬಾಲ ಮೊದಲಾದ ಒಂದಲ್ಲ ಸಾವಿರ ಸಾಮಾನುಗಳು ಬೇಕಂತೆ. ಅವನ್ನೆಲ್ಲಾ ಎಷ್ಟೊಂದು ಶ್ರದ್ಧೆಯಿಂದ ಜನರು ಕೂಡಿಸಿಡುತ್ತಾರೆ?"

"ಇದನ್ನೇ ಅನ್ನುವುದು ಶುದ್ಧ ಮೋಸವೆಂದು. ಅಲ್ಲ, ಭೂತೋಚ್ಚಾಟನೆಗೂ ಸಾಸಿವೆ ಕಾಳಿಗೂ ಯಾವ ಬಾದರಾಯಣ ಸಂಬಂಧ?"

"ರಂಗಣ್ಣಾ, ಅದೆಲ್ಲಾ ನಮಗೆ ಹೇಗೆ ಗೊತ್ತಾಗಬೇಕು? ತಂತ್ರ ಮಂತ್ರಗಳೆಲ್ಲವೂ ರಹಸ್ಯವಾದುವುಗಳು. ಅವುಗಳು ಎಲ್ಲರ ಮಿದುಳಿಗೂ ನಿಲುಕುವುದಿಲ್ಲ, ನಿಲುಕಿದರೂ ದಕ್ಕುವುದಿಲ್ಲ. ಅರ್ಧ ರಾತ್ರಿಯಲ್ಲಿ ಏಕಾಂತದಲ್ಲಿ ಪಿಶಾಚಿಯ ಉಚ್ಚಾಟನೆ ಮಾಡುತ್ತಾರೆ. ಅದನ್ನು ಯಾರೂ ನೋಡಬಾರದು."

"ನೋಡು ಇದನ್ನೇ ಗುಂಡಾಗಿರಿ ಎನ್ನುವುದು! ಬೇರೆ ದೇಶಗಳ ವಿದ್ಯೆ ಗಾಳಿಗೆ ಬಿಟ್ಟ ಕಸ್ತೂರಿಯಂತೆ ವಿಶ್ವಾದ್ಯಂತ ಪಸರಿದರೆ, ನಮ್ಮ ದೇಶದ ವಿದ್ಯೆ ಪಿಸುಮಾತಿನಲ್ಲೇ ಪರ್ಯವಸಾನಗೊಳ್ಳುವುದು. ಕಳ್ಳನಿಗೆ ಬೆಳಕೆಂದರಾಗದು. ಮೋಸದ ಇಂದ್ರಜಾಲ ಕತ್ತಲೆಯಲ್ಲಿಯೇ ನಡೆಯಬೇಕಷ್ಟೆ. ಪಾಶ್ಚಾತ್ಯ ವಿದ್ಯೆಗಳು ಬಂಗಾರದಂತೆ

ಬೆಳಗುತ್ತವೆ. ಅಲ್ಲಿ ರೇಡಿಯೋವನ್ನು ಸಂಶೋಧಿಸಿದರು; ಇಂದು ಜಗತ್ತಿನ ಮೂಲೆ ಮೂಲೆಯಲ್ಲೂ ಅದರ ಉಪಯೋಗ ನಡೆಯುತ್ತದೆ. ನಮ್ಮ ದೇಶದಲ್ಲೇ ಈ ವಿದ್ಯೆಯು ಕರಗತವಾಗಿದ್ದರೆ, ಅದರ ಪರಿಣಾಮ ಏನಾಗುತಿತ್ತೋ ಹೇಳಬರುತ್ತಿರಲಿಲ್ಲ. ನೇರಾಗಿ ಸ್ವರ್ಗದಿಂದಲೇ ಆಕಾಶವಾಣಿ ಕೇಳಿಸುತ್ತಿದೆ ಎನ್ನುತಿದ್ದರೋ ಏನೋ! ಯಜಮಾನನನ್ನು ಸ್ನಾನ ಮಾಡಿಸಿ, ಇಡಿಯ ರಾತ್ರಿ ಉಪವಾಸವಿರಿಸಿ, ಶುಭ ನಕ್ಷತ್ರದಲ್ಲಿ ಗೋದಾನ ಕೊಡಿಸಿ ಅಮಾವಾಸ್ಯೆಯ ರಾತ್ರಿಯಲ್ಲಿ ಏಕಾಂತಕ್ಕೆ ಕರೆದುಕೊಂಡು ಹೋಗಿ, ಯಾವುದಾದರೂ ಮೃತ ವ್ಯಕ್ತಿಯ ಸ್ವರವನ್ನು ಕೇಳಿಸಿ, ಮಹಾಸಿದ್ಧನೆನಿಸಿ ಅದರ ಅವಿಷ್ಕರ್ತನು ಆಜನ್ಮ ಪುಣ್ಯಭಾಜನನಾಗುತಿದ್ದನೋ ಏನೋ! ರೇಡಿಯೋವನ್ನು ಚಂಡಿಯ ಪ್ರತಿಮೆಗೆ ಜೋಡಿಸಿ ಕೆಂಪರಿವೆಯನ್ನು ತೊಡಿಸಿ ಯಕ್ಷ–ಪಿಶಾಚಿಯ ಮಂತ್ರ ಪಠಿಸಿ, ಅಕ್ಷತ—ಕುಂಕುಮಗಳನ್ನು ಬಳಿಸಿ, ಯಥಾರ್ಥ ವಸ್ತುವಿನ ಮೇಲೆ ಇಲ್ಲದ ಮುಖವಾಡವನ್ನು ಸುತ್ತಿ ಮೂಲ ವಸ್ತುವಿನ ,ಪರಿಚಯವೇ ದೊರೆಯದಂತೆ ಮಾಡುವ ಪ್ರಯತ್ನ ಮಾಡಬಹುದಿತ್ತು! ತಾನು ಸಾಯುವ ಗಳಿಗೆಯಲ್ಲಿ ತನ್ನ ಪುತ್ರನನ್ನು ಕರೆದು ಆತನ ಕಿವಿಯಲ್ಲಿ ಈ ಮಂತ್ರೋಪದೇಶ ನೀಡಿ ಆತನನ್ನೂ ಸಿದ್ಧನನ್ನಾಗಿ ಮಾಡುತಿದ್ದನು."

ರಂಗಣ್ಣನ ಈ ವಾದವನ್ನು ಕೇಳಿ ನಾನು ದಂಗು ಬಡಿದೆ. ಕೊನೆಗೆ ಕೇಳಿದೆ: "ರಂಗಣ್ಣ, ನೀನು ಮಂತ್ರವನ್ನು ಮೋಸವೆಂದನ್ನುತ್ತೀಯ?"

"ಮಂತ್ರ ಎಂದರೇನು? ಉಚಿತ ಪರಾಮರ್ಶೆ ನಡೆಸುವುದು ತಾನೆ? ನಿನ್ನ ಹೊಟ್ಟೆಯಲ್ಲಿ ರೋಗಾಣುಗಳಿದ್ದರೆ, ನಾನು ಸಲಹೆ ನೀಡುತ್ತೇನೆ, ಮದ್ದು ಕುಡಿ ಎಂದು. ಆದರ ಬದಲಿಗೆ ನಿನ್ನ ಹೊಟ್ಟೆಯಲ್ಲಿ ಒಂದು ಹುಣಿಸೇಮರ ಬೆಳೆಯುತ್ತಿದೆ ಎಂದು ಹೇಳಿದರೆ ಅದು ಮೋಸವಲ್ಲವೆ? ಆ ಮರವನ್ನು ಕಡಿಯಲು ವೃಕ್ಷೋನ್ಮೂಲನ ಜಪ ಮಾಡಬೇಕೆಂದು ಹೇಳಿದರೆ, ಅದು ಹಸಿ ಹಸಿ ಮೋಸ. ಈ ಜಪಕ್ಕೆಂದು ಒಂದಷ್ಟು ಗೊಬ್ಬರ, ಇಷ್ಟು ಜಿರಲೆಗಳು ಮತ್ತಷ್ಟು ಸೆಗಣಿ ಮತ್ತೊಂದು ಸೇರು ಬಂಗಾರ ಬೇಕೆಂದು ಹೇಳಿದರೆ, ಅದಕ್ಕಿಂತ ದೊಡ್ಡ ವಂಚನೆ ಮತ್ತಾವು

ದಿದೆ? ಇಂತಹ ಮೋಸಗಾರ ಮಹಾ ತಂತ್ರಜ್ಞನೆಂದು ಪೂಜ್ಯನಾಗಿದ್ದಾನೆ, ನಮ್ಮ ದೇಶದಲ್ಲಿ. "ಶ್ರೀ ೧೦೮" ಎಂದು ಆತನ ಹೆಸರಿಗೆ ಹಿಂದೆ ಸೇರಿಸುತ್ತಾರೆ; ಆತನ ಪಾದ ತೊಳೆದ ನೀರನ್ನು ಕುಡಿಯುತ್ತಾರೆ ಜನರು. ನಾನು ಹೇಳುವುದಾದರೆ, ಇಂತಹರ ಹೆಸರಿಗೆ ಮೊದಲು "ಶ್ರೀ ೪೨೦"ನ್ನು ಸೇರಿಸಬೇಕು. ಕೇಳು:

"ತಾಂತ್ರಿಕಂ ಮೇಣ್ ಮಾಂತ್ರಿಕಂ ತಾ ಹಸ್ತರೇಖಾ ವಿಶಾರದಂ
ಭೂತವಕ್ತಾರಂ ಭವಿಷ್ಯಜ್ಞಂ ಮಹಾವಂಚನ ಜಾಲಿಗಳ್ ||"

ನಾನು ಕೇಳಿದೆ: "ರಂಗಣ್ಣ, ಏನನ್ನುತ್ತಿ ನೀನು? ಮಂತ್ರದಂತೆಯೇ ತಂತ್ರವೂ ವಂಚನೆಯೆಂದು ನಿನ್ನ ಅಭಿಪ್ರಾಯವೆ?"

"ನಿಜವಾದ ತಂತ್ರವೆಂದರೆ, ರಸಾಯನ ಶಾಸ್ತ್ರ. ಎರಡು ವಸ್ತುಗಳ ಸಂಯೋಗದಿಂದ ಮೂರನೆಯ ವಸ್ತು ಆವಿರ್ಭವಿಸುತ್ತದೆ. ಈ ವಿಜ್ಞಾನದಿಂದ ಪಾಶ್ಚಾತ್ಯ ದೇಶಗಳು ಬಹಳಷ್ಟು ಮುಂದುವರಿದಿವೆ. ಆದರೆ, ನಾವು ಏನು ಮಾಡುತಿದ್ದೇವೆ? ಮಿಥ್ಯಾಡಂಬರ ಶೀಲರಾಗಿ ಮಣ್ಣನ್ನು ಸಕ್ಕರೆ, ನೀರನ್ನು ಜೇನು ಮಾಡುತ್ತೇವೆ. ತಾಮ್ರವನ್ನು ಚಿನ್ನವಾಗಿಸುತ್ತೇವೆ. ಇದೆಲ್ಲಾ ಮೋಸ. ಧೂರ್ತರು ಈ ಕಾಳಿಕದ ವಿದ್ಯೆಯನ್ನೇ ತಂತ್ರವೆಂದು ಕರೆದಿದ್ದಾರೆ. ಇಂಥ ನಕ್ಷತ್ರದಂದು ಇಂಥ ಮಂತ್ರ ಪಠಿಸಿ ಇಂಥ ಲೇಪವನ್ನು ಹಚ್ಚಿಕೊಂಡರೆ, ನಿಮ್ಮ ದೇಹವೇ ವಾಯುಕವಾಗುವುದು ಎನ್ನುತ್ತಾರೆ. ಇದು ಸತ್ಯವಾಗಿದ್ದರೆ, ನಾನು ರೇಲು ಬಂಡಿಯಲ್ಲೇ ಮನೆ ಮಾಡುತಿದ್ದೆ. ಬೇರೆಯವರಿಂದಲೇ ಫಲಾಹಾರ ತೆಗೆದುಕೊಳ್ಳುತಿದ್ದೆ. ಪ್ರತಿನಿತ್ಯದ ಈ ಭವಣೆಯೇ ತಪ್ಪುತಿತ್ತು! ಈ ನಿನ್ನ ತಂತ್ರದ ಮುಂದೆ ಜನತಂತ್ರ ಬೇಕಾದರೂ ಯಾರಿಗೆ?"

ಇಲ್ಲಿಯೂ ಅಸಮಾಧಾನಗೊಂಡ ನಾನು ಮತ್ತೂ ಹೇಳಿದೆ: "ರಂಗಣ್ಣಾ, ಮಂತ್ರವಾದಿಗಳು ಮೋಹನನ ದೇಹದೊಳಗಿನ ಪಿಶಾಚಿಯನ್ನು ಹೊರಗೆ ತೆಗೆದು ಮತ್ತದು ಪ್ರವೇಶ ಪಡೆಯಬಾರದೆಂದು ಯಂತ್ರ ಕಟ್ಟುವವರಿದ್ದಾರೆ."

ರಂಗಣ್ಣ ಮತ್ತೂ ಉದ್ರಿಕ್ತನಾದಂತೆ ತೋರಿತು. ಆವೇಶದಿಂದಲೇ ಹೇಳಿದ: "ಅದು ಯಂತ್ರವಲ್ಲ, ಷಡ್ಯಂತ್ರ. ಯಂತ್ರದ ಮೂಲಕ

ಆಕಾಶದಲ್ಲಿ ಹಾರಬಹುದು, ಪಾತಾಳದಲ್ಲಿ ನಡೆಯಬಹುದು, ಪರ್ವತ ವನ್ನು ಏರಬಹುದು, ಸಮುದ್ರವನ್ನು ದಾಟಬಹುದು, ಮಳೆಯನ್ನು ಸುರಿಸಬಹುದು, ವಿದ್ಯುತ್ತನ್ನು ಬೆಳಗಿಸಬಹುದು. ಇಂತಹ ಅನಂತ ಯಂತ್ರಗಳು ಪಾಶ್ಚಾತ್ಯ ದೇಶಗಳಲ್ಲಿವೆ. ಯಂತ್ರವು ಗದ್ದೆ ಉಳುತ್ತದೆ, ಬೀಜ ಬಿತ್ತುತ್ತದೆ, ನೀರು ಸುರಿಸುತ್ತದೆ, ಫಸಲು ಕೊಯ್ಯುತ್ತದೆ, ಧಾನ್ಯ ಕುಟ್ಟುತ್ತದೆ, ಗೀತ ಹೇಳಿಸುತ್ತದೆ ಇನ್ನೂ ಏನೇನೋ ಮಾಡುತ್ತದೆ. ಇವುಗಳಾದರೆ ಯಂತ್ರಗಳು. ನಮ್ಮಲ್ಲಿಯ ಸಿದ್ಧರೇನು ಮಾಡುತ್ತಾರೆ? ಒಂದು ಚಿಕ್ಕ ಕರಡಿಗೆಯಲ್ಲಿ ಒಂದು ತಲೆಗೂದಲನ್ನಿಟ್ಟು ಮುಚ್ಚಿ ಯಂತ್ರ ಮಾಡುತ್ತಾರೆ ಇಂದೆಂತಹುದು? ಇದರ ಶಕ್ತಿ ಏನು?"—ತೀರ ವ್ಯಂಗ್ಯವಾಗಿಯೇ ರಂಗಣ್ಣನೆಂದ.

ನಾನೂ ಒಂದು ನಿರ್ಧಾರಕ್ಕೆ ಬಂದು ಹೇಳಿದೆ: "ರಂಗಣ್ಣಾ, ಹಾಗಾದರೆ ನಿನಗೆ ಭೂತಗಳಿಂದ ರಕ್ಷಣೆಗೆಂದು ಕಟ್ಟುವ ಮಂತ್ರಿತ ಯಂತ್ರದಲ್ಲೂ ವಿಶ್ವಾಸವಿಲ್ಲವೆಂದಾಯಿತು."

ಬಾಣದಂತೆ ರಂಗಣ್ಣನ ಮುಖದಿಂದ ಮಾತು ಹೊರಟಿತು: "ಸತ್ಯ ಹೇಳುವುದಾದರೆ, ಈ ಭೂತಗಳ ಮಂತ್ರವನ್ನು ನಮ್ಮ ದೇಶದ ಜನರು ಅರಿತುಕೊಂಡೇ ಇಲ್ಲ. ಭೂತ ಮಂತ್ರವನ್ನು ಬಲ್ಲವರು ಪಾಶ್ಚಾತ್ಯರು. ಅಪ್ ತೇಜಸ್ ವಾಯು ಪೃಥ್ವೀ ಆಕಾಶಗಳೆಂಬ ಪಂಚ ಭೂತಗಳಿಂದ ಅವರು ಎಲ್ಲ ಕೆಲಸಗಳನ್ನೂ ಮಾಡಿಸಿಕೊಳ್ಳುತ್ತಾರೆ. ನಾವು ಮಾತ್ರ ನಕಲಿ ಭೂತಗಳ ಹಿಂದೆ ಸುತ್ತಾಡುತ್ತಾ ಸಾಸಿವೆ ಹುಡುಕ ಹೋಗುತ್ತೇವೆ."

"ತಿಳಿಯಿತು ರಂಗಣ್ಣಾ, ನೀನು ಪಾಶ್ಚಾತ್ಯ ವಿಜ್ಞಾನ ಸಮರ್ಥಕ. ಆದರೆ, ಒಂದು ವಿಚಾರ ಆಧುನಿಕ ವಿಜ್ಞಾನವು ಜಗತ್ತನ್ನು ಸಂಹಾರದತ್ತ ಕೊಂಡೊಯ್ಯುತ್ತಿದೆ."

ವಿಕಟಾಟ್ಟಹಾಸದೊಡನೆ ರಂಗಣ್ಣ ನುಡಿದ: "ಮತ್ತೆ ನಿನ್ನ ರಾಮಾಯಣ– ಮಹಾಭಾರತಗಳು ಜಗತ್ತಿನ ಸೃಷ್ಟಿಮಾಡಿದುವೆನ್ನುತ್ತೀಯ? ಎಲ್ಲಾ ಯುಗಗಳಲ್ಲೂ ಯುದ್ಧ ನಡೆಯುತ್ತದೆ. ಅವರ ದೋಷವನ್ನು ವಿಜ್ಞಾನದ ಮುಖಕ್ಕೆ ಹಚ್ಚಬೇಡ. ಮನೆನ ಚೂರಿ

ಯಿಂದ ನಿನ್ನ ಮುಖವನ್ನು ನೀನೇ ಕತ್ತರಿಸಿಕೊಂಡರೆ, ಆ ಅಪರಾಧ ಯಾರದು?"

"ಪಾಶ್ಚಾತ್ಯ ಸಭ್ಯತೆಯು ಭೌತಿಕವಾದದ ವ್ಯರ್ಥ ಮರೀಚಿಕೆಯಲ್ಲಿ ಉರುಳುತ್ತಿದೆ. ನಮ್ಮ ಪೂರ್ವಜರೂ ಮಹಾಜ್ಞಾನಿಯಾಗಿದ್ದರು. ಆದುದರಿಂದಲೇ ಈ ಪ್ರಾಪಂಚಿಕ ಸಂಪತ್ತನ್ನು ಸುಖಭೋಗವನ್ನು ತುಚ್ಛ ವೆಂದು ಮನಗಂಡರು. ಭೌತಿಕ ವಿಜ್ಞಾನವನ್ನು ಗೌಣವೆಂದು ಬಗೆ ದರು. ಈ ಆಧ್ಯಾತ್ಮಿಕ ಮನೋವೃತ್ತಿಯಿಂದಾಗಿಯೇ ನಮ್ಮ ಧರ್ಮ ಭೂಮಿ ಭಾರತವಿಂದು ಜಗದ್ಗುರುವಿನ ಸ್ಥಾನದಲ್ಲಿದೆ."—ಎಲ್ಲಿಯೋ ಓದಿದ ನನ್ನ ಜ್ಞಾನದ ಬುರುಡೆಯನ್ನು ಬಿಚ್ಚಿ; ನನ್ನ ವಾದವನ್ನು ಸಮ ರ್ಥಿಸುವ ಪ್ರಯತ್ನ ಮಾಡಿದೆ.

"ಲಜ್ಜೆಯೊಂದನ್ನು ತೊರೆದು ಸರ್ವತ್ರ ವಿಜಯಿ ಯಾಗುವುದೆಂ ದರೆ ಇದೇ ನೋಡು. ಒಂದಂಗುಲ ನೆಲಕ್ಕಾಗಿ ಅಣ್ಣ—ತಮ್ಮಂದಿರಲ್ಲಿ ಯುದ್ಧ, ಹಣದಾಸೆಯಿಂದ ಮಕ್ಕಳು ಮಗಳ ವಿಕ್ರಯ, ತುಪ್ಪದ ಹೆಸರಿನಲ್ಲಿ ಕೊಬ್ಬಿನ ವ್ಯಾಪಾರ ನಡೆಯುವ ದೇಶವನ್ನು ನೀನು ಧರ್ಮ ಭೂಮಿಯೆನ್ನುತ್ತೀಯ? ಧರ್ಮವನ್ನು ಅರಿತುಕೊಳ್ಳಬೇಕಿದ್ದರೆ ಯು ರೋಪು-ಅಮೆರಿಕೆಗಳನ್ನು ಸುತ್ತಾಡಿ ಬರಬೇಕು. ರೇಲುಗಾಡಿಯಲ್ಲಿ ಸಾಬೂನು-ಬಟ್ಟೆಗಳೂ ಅಲ್ಲಿ ಸುರಕ್ಷಿತವಿರುತ್ತವೆ. ಇನ್ನು, ಸಾಮಾಜಿಕ ಚರಿತ್ರೆಯ ಪರಿಶುದ್ಧತೆಯನ್ನು ಅಲ್ಲಿಯೇ ಕಾಣಬೇಕು. ಆರೇಳು ವರ್ಷದ ಮಗು ಕೂಡ ಶುದ್ಧ ತುಪ್ಪವನ್ನು ಅಲ್ಲಿ ಕೊಳ್ಳಬಹುದು. ಅಲ್ಲಿನ ಮೂತ್ರ ದೊಡ್ಡಿಯಲ್ಲಿರುವಷ್ಟು ನೈರ್ಮಲ್ಯ ನಮ್ಮ ಭೋಜನ ಶಾಲೆಯ ಲ್ಲಿಯೂ ಇಲ್ಲ. ಇಂಗ್ಲಿಷರು ಥೇಮ್ಸ್ ನದಿಯನ್ನಿಟ್ಟುಕೊಂಡಿರುವಂತೆ ನಾವು ಗಂಗಾ ನದಿಯನ್ನಿಟ್ಟರೆ, ಆಗ ಗಂಗೆಗೆ ಅವಶ್ಯ ಪೂಜೆ ಸಲ್ಲಲೇ ಬೇಕು. ಆದರೆ, ನಮ್ಮ ಜನರು ಗಂಗೆಗೆ ಪುಷ್ಪಮಾಲೆಯರ್ಪಿಸುವುದ ರೊಡನೆ ಮಲಮೂತ್ರಗಳನ್ನೂ ಹಾಕುತ್ತಾರೆ. ಸಾರ್ವಜನಿಕ ಸ್ಥಾನಗಳ ಪವಿತ್ರತೆಯನ್ನೂ ನಾವು ಕಾಯ್ದುಕೊಳ್ಳುತ್ತಿಲ್ಲ. ಹಾಗಿರುವಾಗ ಬೇರೆ ಯವರಿಗೆ ಗುರು ಸ್ಥಾನದಲ್ಲಿದ್ದು ನಾವೇನು ಮಂತ್ರೋಪದೇಶ ಮಾಡಿ ಯೇವು?"

"ರಂಗಣ್ಣಾ, ನಿನ್ನ ಮಾತುಗಳಿಗೆ ಅಸ್ತುಯೆನ್ನುವುದು ಸಾಧ್ಯವಿಲ್ಲ. ನಾಳೆ ಸ್ವಾಮಿ ಆಧ್ಯಾತ್ಮಾನಂದರು 'ಭೌತಿಕವಾದವು ಸರ್ವ ಅನರ್ಥಗಳಿಗೆ ಮೂಲ'ವೆಂಬ ವಿಷಯದ ಮೇಲೆ ಮಾತಾಡಲಿರುವರು...."

ಅರ್ಧದಲ್ಲೇ ತಡೆದು ರಂಗಣ್ಣ ಉದ್ಗರಿಸಿದ: "ಹೌದು, ಅವರು ಭೌತಿಕವಾದಿಯಿಂದ ನಿರ್ಮಾಣವಾದ ರೇಲುಗಾಡಿಯಿಂದಿಳಿದು, ಭೌತಿಕವಾದಿ ನಿರ್ಮಿತ ಕನ್ನಡಕ ತೊಟ್ಟು, ಭೌತಿಕವಾದಿ ಆವಿಷ್ಕೃತ ಧ್ವನಿವರ್ಧಕದ ಮುಂದೆ ಕುಳಿತು, ಭೌತಿಕವಾದಿ ನಾಗರಿಕತೆಯು ಬಹಳ ಕೆಟ್ಟದು ಎಂದು ಆಕ್ರೋಶಮಾಡುತ್ತಾರೆ. ಅವರ ಅನುಯಾಯಿಗಳು ಭೌತಿಕ ಕಾಗದದ ಮೇಲೆ ಭೌತಿಕ ಫೌಂಟನ್ ಪೆನ್ನಿನಿಂದ ಅವರ ಭಾಷಣವನ್ನು ಗುರುತು ಹಾಕಿಕೊಂಡು ಭೌತಿಕ ಟೆಲಿಪ್ರಿಂಟರಿನ ಮೂಲಕ ಭೌತಿಕ ಮುದ್ರಣಾಲಯಗಳಿಗೆ ಮುದ್ರಿಸಲು ಕಳಿಸುತ್ತಾರೆ......" – ಅವನ ಮಾತಿನಲ್ಲಿ ವ್ಯಂಗವು ತುಂಬಿ ತುಳುಕಾಡುತಿತ್ತು.

ಮುಂದುವರಿಸುತ್ತ ಅವನೆಂದನು: "ಪಾಶ್ಚಾತ್ಯ ದೇಶಗಳು ಪಂಚ ಮಹಾ ಭೂತಗಳನ್ನು ತಮ್ಮ ಅಧೀನದಲ್ಲಿಟ್ಟುಕೊಂಡಿವೆ. ನಮ್ಮವರ ತಲೆಯಮೇಲೆ ಮೂರ್ಖತೆಯ ಭೂತ ಕುಳಿತಿದೆ. ಈ ಭೂತವು ಭಸ್ಮೀ ಭೂತವಾದಾಗಲೇ ನಮ್ಮ ಭವಿಷ್ಯ ಉಜ್ವಲವಾಗುವುದು. ಇದಕ್ಕೆಂದೇ ನಾನು ಭೂತನಾಥನನ್ನು ಪ್ರಾರ್ಥಿಸುತ್ತೇನೆ." ಇಷ್ಟನ್ನು ಹೇಳಿದ ರಂಗಣ್ಣನು ಮೇಜಿನ ಮೇಲಿದ್ದ ಆ ದಪ್ಪ ಪುಸ್ತಕವೊಂದನ್ನು ತೆರೆದು ಓದ ತೊಡಗಿದನು. ನಾನು ಇಣಿಕಿ ನೋಡಿದೆ— ಒಂದು ದೊಡ್ಡ ವೈಜ್ಞಾನಿಕ ಪುಸ್ತಕವದು.

"ಬರುತ್ತೇನೆ ರಂಗಣ್ಣಾ" ಎಂದು ನಾನು ಅಲ್ಲಿಂದ ಕಂಬಿ ಕಿತ್ತೆ.

ದಾರಿಯುದ್ದಕ್ಕೂ, ಅದು ಕೇವಲ ಅರ್ಧ ಕಿಲೋಮೀಟರು ಮಾತ್ರ, ನನ್ನ ತಲೆಯಲ್ಲಿ ರಂಗಣ್ಣನ ಭೂತವೇ ಏರಿ ಕೂತಿತ್ತು; ಕಿವಿಗಳಲ್ಲಿ ಆತನ ಭೂತ ಮಂತ್ರವೇ ಗುಯ್ ಗುಡುತಿತ್ತು. ಆದರೂ ರಂಗಣ್ಣನ ವಾದವನ್ನು ಸಂಪೂರ್ಣ ಒಪ್ಪುವ ಸ್ಥಿತಿಗೆ ನಾನು ಬರಲಾಗಲಿಲ್ಲ. ಹಳೆ ಭೂತದ ಪ್ರಭಾವವನ್ನು ಮರೆಸುವಷ್ಟು ಹೊಸತಿನಲ್ಲಿ ಶಕ್ತಿಯಿಲ್ಲದೆ ಇದ್ದುದೇ ಇದಕ್ಕೆ ಕಾರಣವಿರಬಹುದೆ?

ಮೂರು ತಿಂಗಳು ಕಳೆದ ಬಳಿಕ ಒಂದು ದಿನ ಮೋಹನನನ್ನು ಕಂಡೆ. ಈಗ ಆತ ಮೊದಲಿಗಿಂತ ತುಂಬಿಕೊಂಡಂತೆ ಕಂಡ. ಆತನ ಹೆತ್ತವರಿಗೂ ಸಮಾಧಾನವೆನಿಸಿತ್ತು. ಮಂತ್ರವಾದಿ ಮಿತ್ರರೂ ಇದೇ ಸುದ್ದಿಯನ್ನು ತಿಳಿಸುತ್ತ "ವಿಶ್ವಾಸೋ ಫಲದಾಯಕ:" ಎಂದು ಪುನರುಚ್ಚರಿಸಿದರು.

ರಂಗಣ್ಣನ ಕಿವಿಗೆ ಈ ಸಂಗತಿ ಬಿದ್ದಾಗ ಆತ ದನಿಯೆತ್ತಿದ--"ಪ್ರಾಯಕ್ಕೆ ಬರುವ ಹುಡುಗ—ಭೌತಿಕ ಬೆಳವಣಿಗೆ ಆಗಲೇ ಬೇಕು ತಾನೆ?"

ಯಾರು ಸರಿ, ಯಾರು ತಪ್ಪು ಎಂಬ ಪ್ರಶ್ನೆ ಕೆಲವೊಮ್ಮೆ ನನ್ನ ತಲೆ ತಿನ್ನುತ್ತಿದೆ. ಏನೇ ಇರಲಿ, ಮೋಹನ ಹುಷಾರಾದನಲ್ಲಾ ಎಂಬ ಸಂತೋಷದ ಮುಂದೆ ಪ್ರಶ್ನೆಗಳು ತಮಗೆ ತಾವಾಗಿಯೇ ಮರೆಯಾಗುತ್ತವೆ.

## ೧೧ ಚರಮ ಚಿತ್ರ

ಆಗ ಚಿಂತಾರಹಿತನಾಗಿದ್ದ ನಾನು ನವಯುವಕನಾಗಿದ್ದೆ. ಅಧ್ಯಯನಕ್ಕಿಂತ ಆಮೋದ ಪ್ರಮೋದವನ್ನೇ ಬಹುವಾಗಿ ಮೆಚ್ಚುವಂತಹ ಕಾಲೇಜಿನ ವಿದ್ಯಾರ್ಥಿಯಂತಿದ್ದೆ. ಆ ಸಮಯದಲ್ಲೇ ಕಲಾವಿದರೊಡನೆ ಪರಿಚಯಮಾಡಿಕೊಳ್ಳುವ ಅವಕಾಶಗಳೂ ಬಂದೊದಗಿದುವು. ಅವರ ಸ್ವಚ್ಛಂದ ಜೀವನದಲ್ಲಿ ನನ್ನನ್ನು ಆಕರ್ಷಿಸಬಲ್ಲ ಅದೊಂದು ಅವ್ಯಕ್ತ ಶಕ್ತಿ ನನಗೆ ಗೋಚರಿಸಿತ್ತು. ಆದರೆ, ಮುಂದೆ ನಾನು ದೊಡ್ಡ ಸಂಸಾರವೊಂದರ ಭಾರವನ್ನು ಹೊರಬೇಕಾಗಿ ಬಂದಾಗ, ಎಲ್ಲವೂ ಮನಸಿನ ಮಂಡಿಗೆಯಾಗಿಯೇ ಉಳಿದುವು.

ಈ ನಡುವೆ ರವಿ ನನ್ನ ಅಂತರ್ಯದ ಮಿತ್ರನಾಗಿದ್ದ. ಆತನು ಕಲಾವಿದನೆಂಬುದಾಗಿ ಸಾಕಷ್ಟು ಪ್ರಸಿದ್ಧಿಯನ್ನೂ ಪಡೆದಿದ್ದ. ಇದರಿಂದಾಗಿ ಭಾರತ ಸರಕಾರವು ವಿಶೇಷ ಅಧ್ಯಯನಕ್ಕಾಗಿ ಅವನನ್ನು ಯುರೋಪಿಗೆ ಕಳಿಸಿಕೊಟ್ಟಿತು. ನಾವಿಬ್ಬರು ಕೆಲ ವರ್ಷಗಳವರೆಗೆ ಒಬ್ಬರನ್ನೊಬ್ಬರು ಭೇಟಿಯಾಗಲಿಲ್ಲ; ಕಾರಣ, ಬಹಳಷ್ಟು ಅಡಲು ಕೇಳಲು ಹೃದಯ ಬಯಸುತಿತ್ತು. ಆದುದರಿಂದ ನಾನು ಹಳ್ಳಿಯಿಂದ ನಗರಕ್ಕೆ ತೆರಳಿದೆ.

ಇಲ್ಲಿ ಸ್ವಚ್ಛಂದ ಪ್ರಕೃತಿಯ ಜನರು ಮಾತ್ರ ಗುಂಪು ಸೇರಿದ್ದರು. ಮಾತುಕತೆಯಲ್ಲಿ ಯಾವುದೇ ಪ್ರಕಾರದ ದಯೆ—ದಾಕ್ಷಿಣ್ಯಗಳೊಂದೂ ಇರಲಿಲ್ಲ.

"ನಿನಗೆ ಕೈಲಾಸ ಬಾಬುವಿನ ನೆನಪಿದೆಯೆ?" ಯಾವನೋ ಒಬ್ಬ ಮೇಜಿನ ಇನ್ನೊಂದು ಮೂಲೆಯಿಂದ ಪ್ರಶ್ನಿಸಿದ.

"ಅಹುದಹುದು. ಅವನ ಕಥೆಯೇನು? ಅವನು ಏಕೆ ಬರಲಿಲ್ಲ? ರವಿಯು ಉತ್ಸಾಹದಿಂದಲೇ ಕೇಳಿದ.

ಆ ವ್ಯಕ್ತಿ ತುಸು ಅಹಂಕಾರದಿಂದಲೇ ಹೇಳಿತು—"ಕೈಲಾಸ ಬಾಬು ಈಗ ನಮ್ಮ ಸಮಾಜದ ಸದಸ್ಯರಾಗಿಲ್ಲ. ಅವರು ಶಾಲೆಯೊಂದರಲ್ಲಿ ಅಧ್ಯಾಪಕರಾಗಿದ್ದಾರೆ."

"ಏನೆಂದೆ?" ರವಿ ಮತ್ತು ನಾನು ಒಮ್ಮೆಯೇ ಕೇಳಿದೆವು: "ಕೈಲಾಸ ಬಾಬು ಶಾಲಾಧ್ಯಾಪಕನಾದನೆ?"

"ಹೌದು. ನಿಜಕ್ಕೂ ಹೌದು."-ಬೇರೆಯವರೂ ಸಂಗತಿ ಸಮರ್ಥನೆಗಾಗಿ ತಲೆದೂಗಿದರು. ಅವರಲ್ಲಿ ಒಬ್ಬನೆಂದ—"ಆದರೆ, ಹಾಗೇಕಾಯಿತೆಂದು ಮಾತ್ರ ನಮ್ಮೊಡನೆ ಕೇಳಬೇಡಿ. ಅವರೊಡನೆಯೇ ಭೆಟ್ಟಿಯಾಗಿ ಪ್ರಶ್ನಿಸಿದರೆ ಛಲೋದಾಗಿರುತ್ತದೆ. ಹರಿಜನ ವಸತಿಯ ಹೊಸ ಶಾಲೆಯಲ್ಲಿ ಅವರು ನಿಮಗೆ ಸಿಗಬಹುದು."

§ § § § §

ಕಲಾವಿದರು ಸ್ವಭಾವತಃ ದುಂದುವೆಚ್ಚಗಾರರು. ಪ್ರತಿ ಮಾಸವನ್ನೂ ಅವರು ಬಡತನದಿಂದಲೇ ಕಳೆಯಬೇಕಾಗುತ್ತದೆ. ಸಂಪತ್ತಿನ ಸುಖವುಣ್ಣುವ ದಿನಗಳು ಅವರಿಗೆ ಬರುವುದೇ ಅಪರೂಪ. ಆದುದರಿಂದಲೇ ಅವರ ಜೀವನದಲ್ಲಿ ಕಲ್ಪನೆಯು ಅಧಿಕವಾಗಿ, ಯಥಾರ್ಥತೆಯು ಕಡಿಮೆಯಾಗಿರುತ್ತದೆ. ಪ್ರತಿಭಾ ಸಂಪನ್ನ ಕಲಾವಿದರೂ ಇದಕ್ಕೆ ಅಪವಾದವಲ್ಲ. ಒಂದು ಉತ್ಕೃಷ್ಟ ಕಲೆಯ ಮಾದರಿ ಬರೆಯುವುದರಲ್ಲೇ ಅವರು ವರ್ಷಗಳನ್ನು ಕಳೆಯುತ್ತಾರೆ—ಅದರ ಕಲ್ಪನೆಯಲ್ಲಿ ಮತ್ತಷ್ಟು ಸಮಯ! ಕೈಲಾಸ ಬಾಬು ಕೂಡ, ತನ್ನ ಉತ್ತಮ ಕೃತಿಯ ವಿಮರ್ಶೆಯನ್ನು ಮಾಡುತಿದ್ದ; ಆ ವೇಳೆ, ಆತನ ಕಣ್ಣುಗಳಲ್ಲಿ ಆದರ್ಶ ಕಲಾವಿದನಾಗಿ ತನ್ನ ಸ್ವಪ್ನವನ್ನು ಜಾಗ್ರತಾವಸ್ಥೆಗೆ ತರಬಲ್ಲನೆಂದು ನಂಬಲು ಆಧಾರಭೂತವಾದ ಅಪೂರ್ವ ಪ್ರಕಾಶವೊಂದು ಗೋಚರಿಸುತಿತ್ತು.

ಈಗ, ಕೈಲಾಸ ಬಾಬು ಅಧ್ಯಾಪಕನಾಗಿ ಬಿಟ್ಟ ಎಂದು ತಿಳಿದು ನನಗೆ ಮತ್ತಷ್ಟು ಜಿಜ್ಞಾಸೆ ಅಂಕುರಿಸಿತು. "ಆತನ ಪತನ ಹೇಗಾಯಿತು?"—ಎಂಬ ಪ್ರಶ್ನೆ ನನಗರಿವಿಲ್ಲದಂತೆಯೇ ಹೊರಬಂದಿತು. ಈ ಪ್ರಶ್ನೆಯನ್ನು ಆಮೂಲಾಗ್ರ ವಿವೇಚಿಸಿ ಕಾರಣ ತಿಳಿಯಬಯಸಿದೆ.

ಆದುದರಿಂದ, ರವಿ ಅವನಲ್ಲಿಗೆ ಹೊರಟ ಸಂದರ್ಭ ನೋಡಿ. ನಾನೂ ಅವನನ್ನು ಹಿಂಬಾಲಿಸಿದೆ.

ಹರಿಜನ ವಸತಿಯಲ್ಲಿ ಒಂದು ಶಾಲೆಯು ಪುಟ್ಟ ಕಟ್ಟಡದ ಮೇಲೆ 'ಚಪ್ಪರ' ಹಾಕಲಾಗಿತ್ತು! ಅದರ ಒಂದು ಭಾಗದಲ್ಲಿ ಅಧ್ಯಾಪಕರ ವಾಸಕ್ಕೆ ವ್ಯವಸ್ಥೆಯಿತ್ತು. ಬಾಗಿಲಲ್ಲಿಯೇ ನಮ್ಮನ್ನೊಬ್ಬನು ಸ್ವಾಗತಿಸಿದನು. ಅವನು ಕೈಲಾಸ ಬಾಬುವೇ ಆಗಿದ್ದ; ಆದರೆ, ಆತನೆಂದು ಅರಿಯಲು ನನಗೆ ತುಂಬ ಸಮಯ ಬೇಕಾಯಿತು. ಆತನ ನಯನಗಳಲ್ಲಿ ಅವೇ ಹಳೆಯ ಮಿಂಚೊಂದಿರಲಿಲ್ಲವಾದರೆ, ಆ ಅಕಾಲ ವೃದ್ಧನನ್ನು ಕೈಲಾಸನೆಂದು ತಿಳಿಯುವುದೇ ಅಸಾಧ್ಯವಾಗಿರುತಿತ್ತು! ಆತ ಯಾವಾಗಲೂ ಪ್ರಫುಲ್ಲಿತನಾಗಿರುವವನು ಮತ್ತು ಕಲೆಯ ಶ್ರೇಷ್ಠತೆಯ ಬಗ್ಗೆ ತಾಸುಗಟ್ಟಲೆ ವಿಮರ್ಶೆ ಮಾಡುವ ಕಲಾವಿದನಾಗಿದ್ದನು.

ನಮ್ಮನ್ನು ಒಂದು ಸಣ್ಣ ಕೋಣೆಗೆ ಕರೆದೊಯ್ದನವನು. ಮಣ್ಣಿನ ಗೋಡೆಯಿಂದ ಪ್ರತ್ಯೇಕಿತವಾದ ಕಟ್ಟಡದ ಒಂದು ಭಾಗವಾಗಿತ್ತದು. ಅದರೊಳಗೊಂದು ಸಣ್ಣ ಕಿಟಕಿಯಿತ್ತು. ಇದರ ಮೂಲಕ ಸೂರ್ಯನ ಮಂದ ಕಿರಣಗಳು ನಿರಾತಂಕವಾಗಿ ಪ್ರವೇಶಿಸುವಂತಿದ್ದವು

ಆಗ ನಮ್ಮ ದೃಷ್ಟಿ ಗೋಡೆಯ ಮೇಲೆ ತೂಗು ಹಾಕಲ್ಪಟ್ಟ ಒಂದು ಬೃಹದಾಕಾರದ ಚಿತ್ರದ ಮೇಲೆ ಒಂದುಗೂಡಿತು. ಅದನ್ನು ವೀಕ್ಷಿಸುವ ಸಲುವಾಗಿ ನಾವು ಮತ್ತೂ ಮುಂದುವರಿದೆವು. ನಾನು ಸ್ವಯಂ ಕಲಾವಿದನಾಗಿರದಿದ್ದರೂ ಅಂತಹರ ಸಂಪರ್ಕದಲ್ಲಿದ್ದುದರಿಂದ, ಕಲಾಕೃತಿಗಳನ್ನು ಪರೀಕ್ಷಿಸುವ ಶಕ್ತಿ ತುಸು ನಮ್ಮಲ್ಲಿ ಹುಟ್ಟಿಕೊಂಡಿತ್ತು. ಆದರೆ, ಕತ್ತಲೆಯ ಕಾರಣದಿಂದ ಚಿತ್ರದ ರೇಖೆಗಳು ಕಾಣುವಂತಿರಲಿಲ್ಲ; ಆದರೂ ಮೊದಲ ನೋಟದಲ್ಲಿಯೇ ಕಲಾವಿದನು ಅಭಿಮಾನಪಡಬೇಕಾದ ಕೃತಿಯಿದೆಂದು ಕಂಡುಕೊಂಡೆ. ಚಿತ್ರದಲ್ಲಿ ಸುಮಾರು ೨೦ ವಯಸ್ಸಿನ ಒಬ್ಬಾಕೆ ರೋಗಿಣಿಯ ದೃಶ್ಯ ಗುರುತಿಸಲಾಗಿತ್ತು. ಆಕೆಯ ಅಂಗಾಂಗಗಳಲ್ಲಿ ಹೂವಿನ ಸುಕುಮಾರತೆ ಮತ್ತು ಸೌಂದರ್ಯಗಳು ಹೊಳೆಯುತಿದ್ದುವು. ಅವಳು ಒಂದು ಮಂಚದ ಮೇಲೆ ಮಲಗಿದ್ದಳು ಸುತ್ತಮುತ್ತ ಮದ್ದಿನ ಸೀಸೆಗಳು ಚೆಲ್ಲಾಡಿದ್ದುವು. ನಿರಾಶೆ ಮತ್ತು

ಪರಾಜಯದ ಭಾವನೆಗಳನ್ನು ಕೈಲಾಸ ಆ ಚಿತ್ರದಲ್ಲಿ ರೂಪಿಸಿದ್ದ. ಇದು ಕೈಲಾಸನ ಅತ್ಯುತ್ಕೃಷ್ಟ ಕೃತಿಯೆನ್ನಲು ಯಾವ ಅಭ್ಯಂತರವೂ ಇರಲಿಲ್ಲ.

ನಮ್ಮ ನಯನಗಳಲ್ಲಿ ಮೂಡಿದ ಭಾವವನ್ನವನು ಕಂಡುಕೊಂಡಿರಬೇಕು. ಎಂತಲೇ ಗದ್ಗದವದನನಾಗಿ ಹೇಳಿದನು –"ಹೌದು, ಇದು ನನ್ನ ಉತ್ಕೃಷ್ಟ ಕೃತಿಯಾಗಿದೆ." ಅವನ ಈ ಮಾತುಗಳು ನಮ್ಮ ಮೇಲೆ ಹರಡಿದ ಮಂಕುಬೂದಿಯನ್ನು ಜಾಡಿಸಿ ಬಿಟ್ಟುವು. ನಾನು ನುಡಿದೆ— "ಕೈಲಾಸ ಬಾಬು, ಇದು ಅಸಾಧಾರಣ ಚಿತ್ರವಾಗಿದೆ. ನೀನು ಇದರ ಪ್ರದರ್ಶನ ವ್ಯವಸ್ಥೆಯನ್ನೇಕೆ ಮಾಡಲಿಲ್ಲ? ನಿನ್ನ ಕೀರ್ತಿ ನಿಜವಾಗಿಯೂ...."

"ಕೀರ್ತಿ....! ನನಗೆ ಕೀರ್ತಿಯ ಆವಶ್ಯಕತೆಯಿಲ್ಲ!" ಕೈಲಾಸನು ವಿಕಟವಾಗಿ ನಗುತ್ತ ನನ್ನ ಮಾತನ್ನು ಅರ್ಧದಲ್ಲಿಯೇ ತಡೆದುಬಿಟ್ಟ. ಅವನು ಬಹಳ ಉತ್ತೇಜಿತನಾಗಿದ್ದನು; "ನೀನು ಯಾವುದನ್ನು ಕೀರ್ತಿ ಎನ್ನುತ್ತೀಯೋ ಅದು ನನಗೆ ಲಜ್ಜೆಗೆ ಸಮವಾಗಿದೆ. ಈ ಚಿತ್ರದ ಪ್ರದರ್ಶನದಿಂದ ನಾನು ನನ್ನ ನೃಶಂಸತೆ ಮತ್ತು ಹೃದಯ ಹೀನತೆಯ ಪ್ರದರ್ಶನ ಮಾಡುವಂತಾಗುವುದು. ಈ ಚಿತ್ರವು ನನ್ನೊಡನೆಯೇ ಮಣ್ಣು ಸೇರುವುದು."

ನಮ್ಮ ಮುಖಗಳಲ್ಲಿ ಮೂಡಿದ ಭಯ ಮತ್ತು ಅಶಾಂತತೆಯ ಭಾವಗಳನ್ನು ಗುರುತಿಸಿದ ಆತ ಪುನಃ ಹೇಳಿದ, "ನನ್ನನ್ನು ಕ್ಷಮಿಸಬೇಕು." ತನ್ನ ಮಾತಿನ ಬಗ್ಗೆ ತಾನೇ ನಾಚಿಕೊಂಡಂತೆ ಮುಂದುವರಿಸಿದ__"ನನ್ನ ಕಥೆ ನಿಮಗೆ ತಿಳಿದಿಲ್ಲವೆಂದರಿಯದೆ ತಪ್ಪು ಮಾಡಿದೆ; ನಿಮಗೆ ಬೇಕಾದರೆ...."

ನಾವೂ ಅದನ್ನೇ ಬಯಸುತಿದ್ದೆವು, ಆದುದರಿಂದ ಆ ಕೂಡಲೇ ಅವನ ಕಥೆ ಕೇಳುವ ನಮ್ಮ ಅಭಿಲಾಷೆಯನ್ನು ಪ್ರಕಟಗೊಳಿಸಿದೆವು.

§ § § § §

"ನೀವು ಈ ಚಿತ್ರದಲ್ಲಿ ಕಾಣುವಾಕೆ ನನ್ನ ಪತ್ನಿ ಕಮಲಾ. ನೀವು ನಗರ ಬಿಟ್ಟು ತೆರಳಿದ ಸಮಯದಲ್ಲೇ ಆಕೆಯು ಇಲ್ಲಿಗೆ ಬಂದಿದ್ದಳು;

ಆದುದರಿಂದ ನಿಮಗೀಕೆಯ ಪರಿಚಯವಿರಲಾರದು. ಅನಿರೀಕ್ಷಿತವಾಗಿ ನನ್ನಲ್ಲಿಗಾಗಮಿಸಿದ ಈಕೆಯಿಂದಾಗಿ ನಾನು ಬಹು ಸಂತುಷ್ಟನಾದೆ. ಈಕೆ ಅನಾಥೆಯಾಗಿದ್ದು ನಗರದಲ್ಲಿ ಕಲಾವಿದರ ರಚನೆಗಳಿಗೆ 'ಮಾದರಿ'ಯಾಗಿ ನಿಂತು ಹೊಟ್ಟೆ ಹೊರೆಯುತ್ತಿದ್ದಳು. ಆಕೆಯ ಭಾವಪೂರ್ಣ ನೇತ್ರಗಳಲ್ಲಿ ಒಂದು ಬಗೆಯ ವಿಶೇಷ ಆಕರ್ಷಣೆಯಿತ್ತು. ಮುಂದಿನದನ್ನು ಊಹಿಸಿ, ನನ್ನ ಕೆಲಸಕ್ಕಿರಿಸಿಕೊಂಡೆ. ಕ್ರಮೇಣ ಆಕೆ ನನಗೆ ಪ್ರೇರಣೆಯನ್ನೂ ನೀಡ ತೊಡಗಿದಳು. ನಮ್ಮಿಬ್ಬರನ್ನೂ ಕಲಾಪ್ರೇಮವು ಬಂಧಿಸಿದುದರಿಂದ ನಾವು ವಿವಾಹಿತರೂ ಆದೆವು.

"ಆದರೆ ನಮ್ಮ ವೈವಾಹಿಕ ಸುಖ ಜೀವನ ಬಹುಕಾಲ ಸಾಗಲಿಲ್ಲ. ಬಡತನದೊಡನೆ ಕಮಲಾ ಹೋರಾಡಿದ್ದಳು, ಅದರ ಪ್ರಭಾವವು ಆಕೆಯ ಮೇಲೆ ಬೀಳುವುದು ಸ್ವಾಭಾವಿಕ ಇದರಿಂದಾಗಿ ಕ್ಷಯ ರೋಗಕ್ಕಾಹುತಿಯಾದಳು; ನನ್ನ ಶಕ್ತ್ಯನುಸಾರವಾಗಿ ಚಿಕಿತ್ಸೆ ನಡೆಸಿದೆ ಆದರೆ, ರೋಗ ದಿನೇ ದಿನೇ ಬಲಿಯುತ್ತ ಬಂತು.

"ಇದೇ ಸಮಯದಲ್ಲಿ ನನ್ನ ಮನಸ್ಸಿನಲ್ಲೊಂದು ವಿಚಾರ ಹೊಳೆಯಿತು – ಅಲ್ಲ, ಸೈತಾನನು ನನ್ನ ಮೇಲೆ ಆಧಿಪತ್ಯ ಸ್ಥಾಪಿಸಿದ—ಏಕೆಂದರೆ, ಮಾನವನ ಮನದಲ್ಲಿ ಅಮಾನವೀಯ ವಿಚಾರ ಮೂಡಬಾರದಾಗಿತ್ತು. ಆಕೆಯ ರೋಗಗ್ರಸ್ತ ಶರೀರವನ್ನು ನಾನು ಪರಮಾತ್ಮನ ವರವೆಂದುಕೊಂಡೆ. ಆಕೆಯ ಜೀರ್ಣಾವಸ್ಥೆಯನ್ನು ಮಾನವನ ಆತ್ಮ ಸಂಘರ್ಷಣೆಯ ಚಿತ್ರಕ್ಕೆ ಉಪಯುಕ್ತ ಮಾದರಿಯೆಂದು ತಿಳಿದೆ. ಆದುದರಿಂದಲೇ ಆಕೆಯ ಕೋಣೆ ಸಮೀಪದಲ್ಲಿನ ಇನ್ನೊಂದು ಕೊಠಡಿಯಲ್ಲಿ ಕುಳಿತು ನನ್ನ ಕೆಲಸಕ್ಕೆ ತೊಡಗಿದೆ.

"ಕಮಲೆಯ ಆರೋಗ್ಯ ಕೆಡುತ್ತ ಬಂದಂತೆ ನನ್ನ ಚಿತ್ರವು ಪೂರ್ಣವಾಗುತ್ತ ಹೋಯಿತು. ಕಮಲಾ ಕೇವಲ 'ಮಾದರಿ' ಎಂಬಷ್ಟು ಭ್ರಮೆ ನನ್ನಲ್ಲಿ ಹುಟ್ಟಿಕೊಳ್ಳುವಂತಾಯಿತು, ನನ್ನ ಸ್ಥಿತಿ! ಆಕೆಯೂ ಮಾನವಿ, ನನ್ನೊಡನೆ ಜೀವಿಸಲು ಬಂದಿದ್ದಾಳೆ ಎಂಬುದನ್ನು ಮರೆತು ಉತ್ಕೃಷ್ಟ ಕೃತಿಯ ನಡುವೆಯೇ ತಿರುಗಾಡ ತೊಡಗಿದೆ. ಆಕೆಯ ಪಾಲನೆಗಾಗಿ ಒಬ್ಬಾಕೆ ನರ್ಸನ್ನು ನೇಮಿಸಿ ನನ್ನ ಸಮಯವನ್ನೆಲ್ಲಾ

ಚಿತ್ರಕ್ಕಾಗಿ ಮೀಸಲಿಟ್ಟೆ. ದಿನದಲ್ಲಿ ಒಂದೆರಡು ಬಾರಿ ಅತ್ತ ನಾನು ತೆರಳಿ ನೋಡಿ ಬರುತ್ತಿದ್ದೆ. ಅದೂ ಚಿತ್ರರಚನೆಗೆ ಸಹಾಯಕವಾಗುವಂತೆ. ಆಕೆ ಮೃತ್ಯುವನ್ನು ಆಲಿಂಗಿಸುತಿದ್ದಳು. ಇದು ನನಗೆ ತಿಳಿಯದಿರಲಿಲ್ಲ. ಈ ಅನುಭೂತಿ ನನ್ನಲ್ಲಿ ಸಹಾನು ಭೂತಿಯನ್ನು ಹುಟ್ಟಿಸಲಿಲ್ಲ. ಬದಲು, ನನ್ನ ಕೆಲಸವನ್ನು ಮತ್ತಷ್ಟು ಭರದಿಂದ ಮುಂದುವರಿಸಿತು ಈ ಶ್ರೇಷ್ಠ ಕಲಾಕೃತಿ ಪೂರ್ಣಗೊಳ್ಳುವುದಕ್ಕೆ ಮೊದಲೇ ಆಕೆ ತನ್ನ ಜೀವನ ಲೀಲೆ ಯನ್ನು ಪೂರ್ತಿಗೊಳಿಸಬಹುದೆಂಬ ಅಂಜಿಕೆಯು ನನ್ನಲ್ಲಿ ಬೇರೂರಿತ್ತು; ಎಂತಲೇ ಅಷ್ಟು ಸಡಗರ—ಅವಸರ!

"ಆಗ ಬಡ ಮತ್ತು ನಿರಪರಾಧಿ ಹುಡುಗಿಯನ್ನು ನೋಯಿಸಿದ್ದೆ. ಈ ತಪ್ಪನ್ನೆಂದೂ ಮರೆಯಲಾರೆ ಆಕೆ ನನ್ನ ಕಲೆಯೆಂದರೇನೆಂದರಿಯ್ಯ ಳೆಂದೂಹಿಸಿದ್ದೆ. ಆಕೆಯೂ ತನ್ನ ಹೃದಯವನ್ನೆಂದೂ ಪ್ರಕಟಿಸಲಿಲ್ಲ. ಆದರೆ, ಕಮಲಾ ಯಮಸದನ ಸೇರಿದ ಮೇಲೆ ನರ್ಸ್ ಹೇಳಿದಳು— ನಾನು ಆಕೆಯ ಚಿತ್ರ ಬರೆಯುತ್ತಿರುವುದು ಗೊತ್ತಂತೆ. ಆದರೆ, ನನ್ನ ಉತ್ಸಾಹಕ್ಕೆ ತಡೆ ತರಬಾರದೆಂಬ ಇರಾದೆಯಿಂದ ತಿಳಿದೂ ತಿಳಿಯದವ ಳಂತೆ ವರ್ತಿಸಿದಳಂತೆ!

"ಆಕೆಯ ಆ ಕೊನೆಯ ದಿನವನ್ನು ಜೀವನವಿಡಿ ನಾನು ಮರೆಯು ವಂತಿಲ್ಲ. ಇನ್ನು ಕೆಲವೇ ತಾಸುಗಳ ಲೀಲೆಯೆಂದು ನಾನು ಆ ದಿನ ಮುಂಜಾನೆಯೇ ತಿಳಿದುಕೊಂಡಿದ್ದೆ. ಮೃತ್ಯುವೂ ನಿಕಟವಾಗುತ್ತ ಬಂದಿತು. ಆಕೆಯ ಪ್ರಾಣವು ಶರೀರದಲ್ಲಿರಲು ಬಯಸದೆ ಅನಂತದಲ್ಲಿ ಲೀನವಾಗುವುದರಲ್ಲಿತ್ತು.

"ಈ ದೃಶ್ಯ ನನ್ನ ಮೇಲೆ ಬಹಳ ಪರಿಣಾಮ ಬೀರಿತು. ಜೀವನ- ಮರಣಗಳ ಸಂಘರ್ಷಣೆಯಲ್ಲಿ ಯಾತನೆ ಪಡುವವರನ್ನು ನಾನದುವರೆಗೆ ಕಂಡಿಲ್ಲ; ನನ್ನ ಕಲಾವಿದತನ ಕೈ ತೋರಿಸಲು ಹಿಂಜರಿಯಿತು. ಜೀವನ ಮತ್ತು ಮೃತ್ಯುಗಳ ನಡುವೆ ಹೊಡೆದಾಡುತಿದ್ದ ಪತ್ನಿಯ ಬಗ್ಗೆ ರವ ದಷ್ಟೂ ಚಿಂತಿಸಲಿಲ್ಲ. ತತ್‌ಕ್ಷಣ ನನ್ನ ಕೋಣೆಗೆ ಧಾವಿಸಿ, ನಾನು ಕಂಡುದನ್ನು ಕೆನ್‌ವಾಸಿನ ಮೇಲೆ ಅಂಕಿಸುವುದರಲ್ಲಿಯೇ ತಲ್ಲೀನನಾಗಿ ಬಿಟ್ಟೆ.

"ನಾನೆಷ್ಟು ಹೊತ್ತು ಕಾರ್ಯನಿಮಗ್ನನಾಗಿದ್ದೆನೆಂದೀಗ ನೆನಪಿಲ್ಲ, ನರ್ಸ್ ಕೂಗಲಾರಂಭಿಸಿದಾಗಲೇ ನನಗಾದುದು ಎಚ್ಚರ. ಆ ಕೂಡಲೇ ಕಮಲೆ ಪವಡಿಸಿದ ಕೋಣೆಗೆ ತೆರಳಿದೆ. ಆಕೆಯ ಪ್ರಾಣಪಕ್ಷಿ ಹಾರಿ ಹೋಗಿತ್ತು; ನರ್ಸ್ ಆ ಮೃತ ಶರೀರವನ್ನಪ್ಪಿಕೊಂಡು ರೋದಿಸುತಿದ್ದಳು.

"ಕಮಲೆಯ ಶರೀರದ ಸಮೀಪಕ್ಕೆ ತೆರಳಿದ ನಾನು ಆಕೆಯ ಮುಖ ವನ್ನವಲೋಕಿಸ ತೊಡಗಿದೆ, ನನ್ನಲ್ಲಿ ರೋಮಾಂಚವಾಯಿತು. ಸದಾ ಪ್ರಶಾಂತವಾಗಿರುತಿದ್ದ ಅದರಲ್ಲಿ ಈಗ ತಿರಸ್ಕಾರದ ಭಾವ ದೃಗ್ಗೋಚರ ವಾಗುತಿತ್ತು. ನಾನು ಭಯಭೀತನಾಗಿ ಬಿಟ್ಟೆ.

"ಕಮಲ ಅಂತಿಮ ಕ್ಷಣದಲ್ಲಿ ನನ್ನ ಕರೆದಿದ್ದಳೆಂದು ನರ್ಸ್ ತಿಳಿಸಿ ದಳು. ಆದರೆ, ನಾನು ಕಾರ್ಯದಲ್ಲಿಯೇ ತತ್ಪರನಾಗಿದ್ದುದರಿಂದ ನನ ಗಾಕೆಯ ಕ್ಷೀಣ ಧ್ವನಿ (?) ಕೇಳಿಸಲಿಲ್ಲ. ನರ್ಸ್ ನನ್ನನ್ನು ಕರೆತರುವೆ ನೆಂದಳಂತೆ; ಆದರೆ, ಕಮಲ ಅದಕ್ಕೆ ಒಪ್ಪಲಿಲ್ಲವಂತೆ. ಪ್ರಪಂಚದ ಒಬ್ಬ ವ್ಯಕ್ತಿ ಅತ್ಯಧಿಕವಾಗಿ ಪ್ರೀತಿಸುತಿದ್ದ ಒಂದು ವಸ್ತು ತನ್ನ ಕೊನೆಯ ಗಳಿ ಗೆಯಲ್ಲಿ ಆತನನ್ನು ಕಂಡು ವ್ಯಂಗ್ಯವಾಗಿ ನಗುತಿತ್ತು! ನನ್ನ ಶೂನ್ಯ ಹೃದ ಯವನ್ನು ಕಂಡೇ ಕಮಲೆ ಅಷ್ಟೊಂದು ಅವಹೇಳನೆಯಿಂದ ನೋಡುತಿ ದ್ದಿರಬೇಕು—"ಓ, ಆ ಚಿತ್ರ...." ಎಂದಾಕೆ ಅಂತಿಮ ಗಳಿಗೆಯಲ್ಲಿ ಉಚ್ಚ ರಿಸಿರಬೇಕು.

"ಬಹು ತಡವಾಗಿ ಬಹು ಬೆಲೆ ತೆತ್ತು ನಾನೊಂದು ಪಾಠವನ್ನು ಕಲಿತೆ. ಒಂದು ಕೆನ್‌ವಾಸಿನ ತುಂಡಿಗೆ ಮಾನವ ಜೀವನಕ್ಕಿಂತ ಅಧಿಕ ಮಹತ್ವವಿತ್ತು. ನಾನೊಂದು ಮಹಾಪರಾಧ ಮಾಡಿದೆ ಮನೋ ರಂಜನೆಯ ವಿಷಯದಲ್ಲಿ ಕಲೆಯ ಪ್ರವೇಶ ಅನುಚಿತವಲ್ಲ; ಆದರೆ ಯಾರೊಬ್ಬರ ಜೀವನವನ್ನೂ ನಾಶಮಾಡುವ ಅಧಿಕಾರ ಕಲೆಗಿಲ್ಲ. ಕಲೆಯು ಹೀಗೆ ಮಾಡುವುದಾದರೆ, ಅದು ಕಲೆಯಲ್ಲ; ಹೃದಯಹೀನ ಪಿಶಾಚಿಯಾಗುವುದು. ಕಲಾವಿದ ಕಲಾ ಸಾಧನೆಯಲ್ಲಿ ತನ್ನನ್ನೇ ತಾನು ಮರೆತು ಬಿಡುವಾಗ, ಒಬ್ಬ ಮಾನವ ತನ್ನ ಸಂಗಾತಿಯಾಗಿರುವಳೆಂಬು ದನ್ನೂ ಮರೆಯುತ್ತಾನೆ. ಆಕೆ ಆತನಿಗೆ ತನ್ನ ಕಲೆಯ ಸಾಧನ ಮಾತ್ರ ವಾಗಿ ಗೋಚರಿಸುತ್ತಾಳೆ. ಯಾವುದರ ಹೃದಯದಲ್ಲಿ ಏನಡಗಿದೆ ಎಂಬು

ದನ್ನು ಪ್ರದರ್ಶಿಸುವ ಪ್ರಯತ್ನದಲ್ಲಿ ಆತ ಕಣ್ಣು ಮುಚ್ಚಿಕೊಳ್ಳುತ್ತಾನೆ. ಇಲ್ಲಿಯೇ ಕಲೆಯ ಕೊಲೆಯಾಗುವುದು.

“ಆ ಮೇಲೆ ಎಂದೂ ಕಲಾ ಸಾಧನೆ ಮಾಡಲಾರೆನೆಂದು ನಿಶ್ಚಯಿಸಿ ಬಿಟ್ಟೆ. ಕಮಲೆಗೆ ನಾನೆಸಗಿದ ಅಪರಾಧಕ್ಕಿದೇ ಪ್ರಾಯಶ್ಚಿತ್ತ. ನಮ್ಮ ನಿಶ್ಚಯಗಳು ನಾವು ಕೀರ್ತಿಕಾಮಿಗಳಾದುದರಿಂದ ಸುದೃಢವಿರುವುದಿಲ್ಲ. ಆದುದರಿಂದಲೇ ಈ ಚಿತ್ರವನ್ನಿಲ್ಲಿಗೆ ತಂದೆ. ಮೊದಲಿನ ಚಿತ್ರದಲ್ಲಿ ಪರಿವರ್ತನೆ ಮಾಡಿ ವ್ಯಕ್ತಪಡಿಸಲಸಾಧ್ಯವಾದ ತಿರಸ್ಕಾರವನ್ನು ಅದರ ಮುಖದಲ್ಲಿ ಚಿತ್ರಿಸಿದೆ.

“ಯಾರಾದರೂ ನನ್ನ ಕಲಾವಿದ ಜೀವನದ ಸ್ಮರಣೆ ತಂದುಕೊಟ್ಟು ಪುನಃ ಅದಕ್ಕೆ ತೊಡಗಬೇಕೆಂದು ಹೇಳಿದರೆ, ನಾನು ಈ ಕೋಣೆಗೆ ಬಂದು ಈ ಚಿತ್ರವನ್ನೇ ನೋಡುತ್ತೇನೆ. ಆಗ ನನ್ನ ಹೃದಯದಲ್ಲಿ ಕಲೆಯ ಬಗ್ಗೆ ತಿರಸ್ಕಾರ ಭಾವನೆಯು ಹುಟ್ಟುವುದು; ಶಾಲಾಧ್ಯಾಪಕನಾಗಿರುವುದೇ ಉಚಿತವೆಂದು ನನಗಾಗ ಕಾಣುತ್ತದೆ.”

§ § § § §

ಇಷ್ಟರಲ್ಲಿಯೇ ಸಾಕಷ್ಟು ಕತ್ತಲು ಹರಡಿತ್ತು ಕೈಲಾಸ ಬಾಬು ದೀರ್ಘ ಶ್ವಾಸವೊಂದನ್ನು ಬಿಟ್ಟು, ಒಂದು ದೀಪ ಉರಿಸಿ ತಂದ. ನಮಗೂ ತುಸು ಅಂಜಿಕೆಯೆನಿಸಿತ್ತು. ಕಮಲೆಯ ಮುಖದಲ್ಲಿ ಭಯಾನಕ ಜುಗುಪ್ಸೆ ವ್ಯಕ್ತಪಡುತಿತ್ತು. ನಮ್ಮ ಶರೀರವೂ ಕಂಪಿಸದೆ ಉಳಿಯಲಿಲ್ಲ. ನಿಜವಾಗಿಯೂ ಅದು ಕೈಲಾಸನ ಅತ್ಯುತ್ಕೃಷ್ಟ ಕೃತಿಯಾಗಿತ್ತು; ಚರಮ ಚಿತ್ರವಾಗಿತ್ತು. ಆದರೆ, ಅದೆಷ್ಟು ರುದ್ರ ಭಯಾನಕ! ಅದರ ಸಂದೇಶವೆಂತಹ ಕಠೋರ!

## ೧೨ ಶ್ರಮದಾನ

ಭಗವಾನ್ ನೀಲಕಂಠನ ಚಿತ್ರದ ಸಮ್ಮುಖದಲ್ಲಿ ಪ್ರಭಾಕರನು ನಯನಗಳನ್ನು ಮುಗಿದು ನತಮಸ್ತಕನಾದನು. ಪ್ರತಿದಿನ ಪ್ರಾತಃ ಕಾಲ ಸ್ನಾನಾನಂತರ ಕೆಲ ನಿಮಿಷ ಕಾಲ ಪ್ರಭು ನೀಲಕಂಠನ ಮುಂದೆ ನಿಂತು ಧ್ಯಾನಮಗ್ನನಾಗುತಿದ್ದ; ಆದರೆ, ಇಂದೇಕೋ ಬಹುಹೊತ್ತು ನಿಂತೇ ಉಳಿದ. ಹಠತ್ತಾಗಿ ತಲೆಯೆತ್ತಿದ; ರೆಪ್ಪೆಗಳು ತೆರೆದುವು; ನೇತ್ರ ಸಂಪುಟಗಳಿಂದ ಅಶ್ರುಬಿಂದುಗಳು ಹೊಳೆಯತೊಡಗಿದುವು. ಬಟ್ಟೆಯ ತುದಿಯಂಚಿನಿಂದ ಕಣ್ಣುಗಳ ಮೂಲೆಯನ್ನು ಒರಸಿಕೊಂಡು ತಿರುಗಿ ಅತ್ತಿತ್ತ ನೋಡಿದ. ಪ್ರಾಂಗಣದಲ್ಲಿ ಯಾರೊಬ್ಬರೂ ಇದ್ದಂತೆ ತೋರಲಿಲ್ಲ. ಸಮೀಪದ ಎಲ್ಲ ಮನೆಗಳಲ್ಲಿ ಚಹಾವಿಟ್ಟ ಸ್ಟವ್ ಉರಿಯುವ ಸದ್ದು ಕಿವಿದೆರೆಗೆ ಬಡಿಯುತಿತ್ತು.

ಪ್ರಭಾಕರ ಅಂಗಿತೊಟ್ಟು ತತ್‌ಕ್ಷಣ ಮನೆಯ ಮೆಟ್ಟಲಿಳಿದ. ಮಾರ್ಗಕ್ಕೆ ಮುಟ್ಟಿದೊಡನೆಯೇ ಪೂರ್ವ ದಿಶೆಗೆ ತಿರುಗಿ ಉದಯಿಸುವ ಸೂರ್ಯದೇವನಿಗೆ ಪ್ರಣಾಮಸಲ್ಲಿಸಿದ. ನಾನಾ ಚೌಕದತ್ತ ಆತನ ಪಾದಗಳು ಯಾತ್ರೆ ಬೆಳೆಸಿದವು.

ಪ್ರಭಾಕರ ಮೂವತ್ತು ವರ್ಷ ವಯಸ್ಸಿನ ತರುಣ ತಪಸ್ವಿ. ಲೋಕ ಸೇವೆಯೇ ಇವನ ಅಖಂಡ ಜೀವನದ ಮುಖ್ಯೋದ್ದೇಶವಾಗಿತ್ತು. ಕೀರ್ತಿಗೋಸ್ಕರ ಅಖಂಡ ಪ್ರಪಂಚ ಹೊಡೆದಾಡುತ್ತಿದೆ. ಮೌನ ವ್ರತಿಗಳು ಈ ಪೃಥ್ವಿಯಲ್ಲಿರುವುದೇ ಅತಿ ವಿರಳ; ಇದ್ದರೂ ಅವರ ಬಗ್ಗೆ ನಮಗೇನೂ ತಿಳಿದಿರುವುದಿಲ್ಲ. ಆ ಮೌನ ಹಾಗೂ ವ್ರತಗಳೆಂದರೇನೆಂಬುದನ್ನೂ ನಮ್ಮವರಲ್ಲಿ ಹೆಚ್ಚಿನವರು ತಿಳಿದಿಲ್ಲ.

ದಾರಿಗುಂಟ ನಡೆನಡೆಯುತ್ತ ಪ್ರಭಾಕರ ಆಲೋಚಿಸ ತೊಡಗಿದ—"ಕಠೋರತೆಯಿಂದ ತಮ್ಮ ಕರ್ತವ್ಯಪಾಲನೆ ಮಾಡುವವರೇ

ಪುರುಷರು. ಜೀವನದ ತೂಗಾಟ ಸಾಮಾನ್ಯವಾದುದಲ್ಲ. ಇದರೊಡನೆ ಹೊಂದಿಕೊಂಡವನು ಮಾತ್ರ ಗಟ್ಟಿಯಾಗಿ ನಿಲ್ಲುತ್ತಾನೆ; ಹೊಡೆದಾಡಿದವನು ಮುರಿದೇ ಹೋಗುತ್ತಾನೆ. ಮನೆಯಿಡಿ ತುಂಬಿದೆ, ತಾಯಿಯಿದ್ದಾಳೆ; ಸೋದರರಿದ್ದಾರೆ, ಸೋದರಿಯರೂ ಇರುವರು; ಹೆಂಡತಿಯಿದ್ದಾಳೆ. ಮಕ್ಕಳುಮರಿಗಳು ಕೂಡ ಇವೆ. ಇವರೆಲ್ಲರ ಬಗ್ಗೆ ತನ್ನದಾದ, ತಾನು ನಿರ್ವಹಿಸಬೇಕಾದ ಕರ್ತವ್ಯವೊಂದಿದೆ. ಇದು ಗೊತ್ತು. ಆದರೆ, 'ಮನೆ'ಯೆಂಬುದು ಯಾರಿಗೆ ತಾನೇ ಇರುವುದಿಲ್ಲ? ಮನೆಯಿದೆಯೆಂದರೆ, ಮನೆಯವರೊಡನೆಯೇ ಯಾವಾಗಲೂ ಅಂಟಿಕೊಂಡಿರಬೇಕೆಂದು ಅರ್ಥವಲ್ಲ. ತ್ಯಾಗ ಮಾಡುವುದಕ್ಕೆ ಕೈಯಲ್ಲಿ ಬೇರೇನೂ ಇಲ್ಲದವನು ಏನನ್ನು ತ್ಯಜಿಸುತ್ತಾನೆ? ಕಂಗಾಲಾದವನು ಹಣಕೊಡಲಾರ; ನಗ್ನ ಶರೀರಿ ವಸ್ತ್ರದಾನ ಮಾಡಲಾರ ..."

"ಆದರೆ?...." ನಾನಾ ಚೌಕ ಬರುತ್ತಿರುವಂತೆಯೇ ಆತ ತನಗೆ ತಾನೇ ಪ್ರಶ್ನೆ ಹಾಕಿಕೊಂಡ. ಜನರು ಆತನ ಬಗ್ಗೆ ಏನೂ ಅಂದುಕೊಳ್ಳುವುದಿಲ್ಲ. ಕೆಲವರು ಅವನನ್ನು 'ಬೀದಿ ಬಸವ'ನೆನ್ನಬಹುದು; ಮತ್ತೆ ಕೆಲವರು ಧರ್ಮ ಲಂಪಟನೆನ್ನುವುದೂ ಸಾಧ್ಯ. ಮೊದಲು ಮನೆಯಲ್ಲಿ ದೀಪವುರಿಸಿ ಆ ಮೇಲೆ ಮಂದಿರಲ್ಲಿ ಎಂಬುದೇನೋ ಸರಿಯೇ. ಆದರೆ, ತನ್ನ ಜೀವನದ ಬಗ್ಗೆ ಯಾವ ಪ್ರಕಾರದ ಚಿಂತೆಯನ್ನೂ ಮಾಡದೆ ಲೋಕ ಕಲ್ಯಾಣಕ್ಕಾಗಿ ಹಾಲಾಹಲವನ್ನು ಪಾನಮಾಡಿದ ಆ ನೀಲಕಂಠನನ್ನು ಜನರೇಕೆ ಮರೆತು ಬಿಡುತ್ತಾರೆ?

....ಇದೇ ರೀತಿಯಾಗಿ ಜೀವನದ ಕಾಲಕೂಟ ಬಿಂದು ಬಿಂದುವಾಗಿ ಪ್ರಭಾಕರನ ಶರೀರದಲ್ಲಿ ಇಳಿಯುತ್ತ ಬರುತಿತ್ತು. ಆದರೆ ಏನು? ಮಹಾದೇವ ಅವನ ಆರಾಧ್ಯ ದೈವವಾಗಿದ್ದ. ಆತನ ಶರೀರದಲ್ಲಿ ಹಾಲಾಹಲವು ಅವಶ್ಯ ವ್ಯಾಪ್ತವಾಗಿದೆ; ಆದರೂ ನೀಲಕಂಠನಾಗಿ ಆತ ಮತ್ತೂ ದೇದೀಪ್ಯಮಾನವಾಗಿ ಪ್ರಸಿದ್ಧನಾಗಲಿಲ್ಲವೆ?

"ನಮಸ್ಕಾರ, ಪ್ರಭಾಕರರಾಯರೇ."

"ಅಂ, ನಮಸ್ತೆ." ಪ್ರಭಾಕರ ಚಕಿತನಾಗಿ ನಿಂತುಬಿಟ್ಟ. ಮುಂದುಗಡೆ ಲೀಲಾಧರನಿದ್ದ.

"ನೀವೇನೋ ಬಹಳ ವಿಚಾರನಿಮಗ್ನರಾಗಿ ನಡೆಯುತ್ತಿರುವಂತೆ ಗೋಚರವಾಗುತ್ತೀರಿ ..ನಿಮ್ಮತ್ತಗಡೆಗೇನೇ ಹೊರಟು ಬರುತಿದ್ದೆ..."

"ಹಾಂ, ಹಾಂ, ಹೇಳು; ಏನು ಸಮಾಚಾರ? ಯಾವ ಕಾರ್ಯ ನಿಮಿತ್ತ?"—ಸದಾ ಇತರರ ಸೇವೆ ಮಾಡುವುದಕ್ಕೆ ಕಾರತರನಾಗಿರುತಿದ್ದ ಪ್ರಭಾಕರ ಸುಪ್ರಸನ್ನನಾಗಿ ಹೇಳಿದ.

"ಸೋದರವಾಟಿಯಲ್ಲಿ ಕಟ್ಟಲಾಗುವ ಮನೆಗಳ ಬಗ್ಗೆ ಶ್ರಮದಾನ ನಡೆಯುತ್ತಿದೆಯಲ್ಲಾ? ಆ ವಿಚಾರದಲ್ಲಿ..."

"ಓ, ಅದೇ? ಹಾಂ........ಹಾಂ........ಅವಶ್ಯ, ನಾವು ಅಲ್ಲಿಗೆ ತೆರಳೋಣ."

"ನೀವು ಖಂಡಿತಕ್ಕೂ ಬರುವಿರಿ; ನಾನೂ ಸಿದ್ಧನೇ. ಆದರೆ, ತಮ್ಮ ಆಸುಪಾಸಿನಿಂದ ಇನ್ನೂ ಕೆಲವರನ್ನು ಕರೆತರಬೇಕೆಂದು ಅಣ್ಣ ಹೇಳಿದ್ದಾನೆ. ಇಲ್ಲವಾದರೆ .."

"ಹಾಂ....ಸರಿಯೇ."—ಪ್ರಭಾಕರ ನಿಮಗ್ನನಾದ. "ಉಳಿದವರೂ ಬರುವರು. ಚಿಂತಿಸಬೇಡಿ. ಅಂತಹ ಗೊಂದಲವೇನನ್ನೂ ನಾವು ಎಬ್ಬಿಸಿಲ್ಲ."

"ಸರಿ, ನಿಮ್ಮ ಈ ಮಾತೇ ನನಗೆ ಸರಿದೋರುವುದಿಲ್ಲ. ಹೆಸರು ಮತ್ತು ಫೊಟೊಗಳು ಪ್ರಕಾಶವಾಗುವ ಪ್ರದರ್ಶನಾವಕಾಶವೊದಗಿದಾಗ ನೋಡಿರಿ, ಎಲ್ಲರೂ ಸ್ವಯಂಸಿದ್ಧರೇ."

"ಆದರೆ, ತಮ್ಮಾ, ಪಟ ಪ್ರಕಾಶವಾಗುವುದಷ್ಟರಿಂದಲೇ ಏನು? ನಮಗೆ ಕೆಲಸಮಾಡಬೇಕು; ಸರಿಯಾದ ಕೆಲಸ!" ಪ್ರಭಾಕರನ ಮುಖದಲ್ಲಿ ಗುರು ಗಂಭೀರತೆ ಮೂಡಿಬಂತು. ಕಂಠನಾಳ ತುಸು ಕಠೋರವಾಯಿತು.

ಲೀಲಾಧರನೊಡನೆ ಮಾತಾಡುತ್ತ ಮುಂದುವರಿಯುವಾಗ, ಗೋವಿಂದನು ಅವರನ್ನು ತಡೆದನು.

"ಪ್ರಭಾಕರರಾಯರೇ, ಇನ್ನೆಷ್ಟು ತಡೆಯಲಿ? ನಿಮ್ಮ ಗೌರವದ ವಿಚಾರ ನೆನಪಿದೆ ತಾನೆ? ಅಥವಾ...ಇಲ್ಲಿ ನೋಡಿ..."

"ಸರಿಯಾಗಿದೆ, ತಮ್ಮಾ ಸರಿಯಾಗಿದೆ. ಇಂದು ತುಸು ಆಗತ್ಯ ಕೆಲಸವಿದೆ. ಅದರ ಬಗ್ಗೆ ಮರೆಯುವುದಿಲ್ಲ." ಅವರು ವೇಗವಾಗಿ ಧಾವಿಸಿದರು. ನಡುದಾರಿಯಲ್ಲಿಯೇ ರಾಮದೇವನು ಅಡ್ಡ ನಿಂತುಕೊಂಡಿದ್ದನು. ಪ್ರಭಾಕರನು ಎಂದು ಕೊಂಡನು—"ಸಾಲ ತೆಗೆದುಕೊಳ್ಳುವುದು ಪಾಪ, ತೆಗೆದುಕೊಂಡರೂ ಅದನ್ನು ಶೀಘ್ರವಾಗಿ ಪಾವತಿ ಮಾಡದಿರುವುದು ಮಹಾ ಪಾಪ!" ನಾನಾ ಶಂಕರನ ದೇವಾಲಯದ ಸಮೀಪ ಬಂದು ಅವರು ಬಸ್ಸು ಹತ್ತಿ ದಿಲ್‌ಬಹಾರ್ ರೋಡಿಗೆ ಬಂದರು. ಇಲ್ಲಿಯೇ ಇವನದೊಂದು ಪುಟ್ಟ ಅಂಗಡಿಯಿತ್ತು. ಅಂಗಡಿಯಾದರೂ ಅದರೊಳಗೆ ಕೂರುವಷ್ಟು ಸ್ಥಳಾವಕಾಶವಿರಲಿಲ್ಲ, ಇಡಿ ದಿನ ಫುಟ್ ಪಾಥ್‌ನಲ್ಲಿ ನಿಂತೇ ಕಾಲಹರಣ ಮಾಡುತಿದ್ದ.—ಎಲೆ-ಪಟ್ಟ ಅಂಗಡಿಯಂತೆ ಒಂದು 'ಸ್ಟಾಲ್' ಆಗಿತ್ತು ಅದು. ತುದಿಯಿಂದ ಬುಡದವರೆಗೂ ಅಲ್ಲಿ ದೇಶೀಯ ಚೂರ್ಣಾದಿ ಔಷಧಗಳಿದ್ದುವು. ಅವನು 'ಆಯುರ್ವೇದ ವಿಶಾರಧ'ನಾಗಿದ್ದರೂ ಜನಸೇವೆ ಮಾಡುತಿದ್ದನೇ ಹೊರತು ವ್ಯಾಪಾರವನ್ನಲ್ಲ. ಇದರಿಂದಾಗಿಯೇ ಅಂಗಡಿಯ ಗತಿ ಇಷ್ಟರ ವರೆಗೆ ಬಂದು ಮುಟ್ಟಿತ್ತು. ಹಣಕೊಟ್ಟವರು ಕೊಟ್ಟರು; ಇಲ್ಲದವರು ಇಲ್ಲ. ಪ್ರಭಾಕರನು ಮಾತಾಡುತ್ತಲೇ ಇರಲಿಲ್ಲ. ಎಲ್ಲಾದರೂ ಮನೆಯಲ್ಲಿ ಮಕ್ಕಳು ಮರಿಗಳು ಹಾಲಿಗಾಗಿ ಪಟ್ಟು ಹಿಡಿದರೆ, ಆಗ ಇಂದು ಖಂಡಿತಕ್ಕೂ ಮದ್ದುಕೊಳ್ಳುವವರೊಡನೆ ಹಣ ವಸೂಲು ಮಾಡಿಯೇ ತೀರುವೆನೆಂದು ದೃಢ ನಿಶ್ಚಯ ಮಾಡುತಿದ್ದ; ಆದರೆ, ಅಂಗಡಿಗೆ ಬಂದು ರೋಗಿಗಳು ತಮ್ಮ ಪ್ರಾಣವನ್ನಾದರೂ ಉಳಿಸಿಕೊಳ್ಳಬೇಡವೆ? ಎಂದುಕೊಳ್ಳುತ್ತಾನೆ. ಆದುದರಿಂದಲೇ ಔಷಧ ಕೊಡುವಾಗ, "ತಮ್ಮಾ, ಹಣದ ಸಂಗತಿ? ಮೊದಲಿಗೆ ಗುಣಮುಖನಾಗು...." ಎಂಬ ವಾಕ್ಯವೇ ಆತನ ಮುಖದಿಂದ ಅರಿವಿಲ್ಲದಂತೆಯೇ ಹೊರ ಬರುತಿತ್ತು!

ನಾಲ್ಕನೆಯ ದಿನ ತನ್ನ ಆಸುಪಾಸಿನ ಇನ್ನು ಕೆಲವು ಸದಸ್ಯರೊಡನೆ ಪ್ರಭಾಕರ 'ಸೋದರವಾಟಿ'ಗೆ ತೆರಳಿದ. ನಗರದಲ್ಲಿ ವಸತಿಯೇ ಒಂದು ಮಹಾ ಸಮಸ್ಯೆಯಾಗಿದೆ. 'ಸೋದರವಾಟಿ'ಯಲ್ಲಿ ಕೊಳಕು ಗುಡಿಸಲುಗಳನ್ನು ಕಿತ್ತೆಸೆಯಲಾಗಿತ್ತು. ಕೆಲವು ಚಿಕ್ಕ ಚೊಕ್ಕ ಮನೆ

ಗಳನ್ನು ಕಟ್ಟಿ, ಆ ಕೊಳಚೆಯಲ್ಲಿ ವಾಸಿಸುತಿದ್ದವರಿಗೆ ತುಸು ಆರಾಮ ದೊರಕಿಸಬೇಕೆಂಬ ವಿಚಾರವಿತ್ತು. ಇದಕ್ಕಾಗಿಯೇ ಶ್ರಮದಾನ ಮಾಡುವ ಸದವಕಾಶವನ್ನು ಒದಗಿಸಲಾಗಿತ್ತು.

ವಿಭಿನ್ನ ಸಂಸ್ಥೆಗಳ ಸದಸ್ಯರ ದಳಗಳು, ಶಾಲೆ ಮತ್ತು ಕಾಲೇಜು ಗಳ ವಿದ್ಯಾರ್ಥಿಗಳ ಸಮೂಹ, ಅಲ್ಲದೆ ಕೆಲವು ಸ್ಥಳೀಯ ಪ್ರಮುಖರೂ ಅಲ್ಲಿ ನೆರೆದಿದ್ದರು. ಓರ್ವ 'ಕೆಮೆರಾಮ್ಯಾನ್' ಕೆಮೆರಾ ಸರಿಪಡಿಸಿ, ಹಿಡಿದು ಅತ್ತಿತ್ತ ಸರಿದಾಡುತಿದ್ದ. ಎದೆಯನ್ನೆಲ್ಲರೂ ಉಬ್ಬಿಸಿ ನಿಂತರು. ಹೇಳು ಹೇಳುತಿದ್ದಂತೆಯೇ ನಗು ತಡೆಯಲಾಗಲಿಲ್ಲ; ಫಿಲ್ಮ್ ಆಗಲೇ ತೆಗೆದುದೂ ಆಯಿತು. ಶ್ರಮದಾನ ಮಾಡುವ ವೀರ ಸೈನಿಕರು—ದೇಶ ಸೇವಕರು—ಇದುವರೆಗೆ ನಿಂತು ಸೋತ ತಮ್ಮ ಕಾಲುಗಳಿಗೆ ವಿಶ್ರಾಂತಿ ಯನ್ನಿತ್ತರು. ಪ್ರಭಾಕರನ ದಳ ಮತ್ತು ಸಮಿತಿಯ ಕಾರ್ಯಕರ್ತರು ಮೌನವಾಗಿ ತಲೆಯೆತ್ತದೆ ಕಾರ್ಯನಿಮಗ್ನರಾಗಿದ್ದರು. ಪ್ರಭಾಕರ ಗಾರೆ ತಯಾರು ಮಾಡುವುದರಲ್ಲಿ ತಲ್ಲೀನನಾಗಿದ್ದ.

ನಾಲ್ಕು ತಾಸುಗಳುರುಳಿದುವು. ವಿಶ್ರಾಮ ಪಡೆಯುತಿದ್ದ ದಳ ಗಳು ಅದೆಂದೋ ಹೊರಟು ಹೋಗಿದ್ದುವು. ಗುಡಿಸಲಿನ ನಿವಾಸಿಗಳು ಅವರಿಗೆ ಭಾವಪೂರ್ಣ ವಿದಾಯವಿತ್ತಿದ್ದರು.

ಇಟ್ಟಿಗೆ ಪರಿಶೀಲನೆಯಲ್ಲಿ ಪ್ರಭಾಕರ ತನ್ನನ್ನೇ ತಾನು ಮರೆತಿದ್ದ. ಅವೆಲ್ಲವೂ ಬೇರೆ ಬೇರೆ ದಾನ ಶೂರ ಸಂಸ್ಥೆಗಳಿಂದ ದಾನವಾಗಿ ಬಂದಿ ದ್ದುವು. ಕೆಲವೇ ಹೊತ್ತಿನಲ್ಲಿ ಕೆಲವು ಜನರು ಬಂದು ಪ್ರಭಾಕರ ನನ್ನು ಮುತ್ತಿದರು. "ಅಣ್ಣಾ, ನೋಡಿದಿಯಲ್ಲಾ? ಫೊಟೊ ತೆಗೆದು ಕೊಂಡರು. ಹಾರತುರಾಯಿಗಳನ್ನು ಹಾಕಿಸಿಕೊಂಡರು; ತಲೆ ಕೊಸರಿ ಕೊಂಡು ಓಡಿ ಬಿಟ್ಟರು. ಜನರನ್ನು ವಂಚಿತಗೊಳಿಸುವುದರಲ್ಲಿ ಇವರಿ ಗೇನು ಆನಂದವಾಗುತ್ತದೆಯೋ?" ವಿಸ್ಮಯ ತಿರಸ್ಕಾರ ಬೆರಸಿದ ಧ್ವನಿ ಯಿಂದ ಪ್ರಶ್ನಿಸಿದರು. ಇವರಿಗೆ ಆ ಹೊರಟವರ ಮೇಲೆ ಅತೀವ ವೆಂಬಷ್ಟು ಕ್ರೋಧ ಹುಟ್ಟಿಕೊಂಡಿತ್ತು.

ಲೀಲಾಧರ ನಕ್ಕು ಹೇಳಿದ—"ಸಮುದ್ರ ಮಂಥನದ ಘಟನೆ ಯನ್ನು ನೀವೇಕೆ ಮರೆತು ಬಿಡುತ್ತೀರಿ? ಶೇಷನಾಗನ ಮುಖದ ಪಕ್ಕ

ದೈತ್ಯರು ಮತ್ತು ಬಾಲದತ್ತ ದೇವತೆಗಳು! ಕೈಕೆಸರು ಮಾಡಿಕೊಳ್ಳು ವುದು ಮತ್ತು ಶೇಷನಾಗನ ಮುಖ ಹಿಡಿಯುವುದರ ನಡುವೆ ಅಂತರ ವೇನೂ ಇಲ್ಲ."

"ಪಾಪ, ಅವರಿಗೇನೋ ಬೇರೆ ತುರುಸಿನ ಕೆಲಸವಿದ್ದಿರಬೇಕು. ಸುಮ್ಮನೆ ಯಾಕೆ ಹಾಗೆನ್ನುತ್ತೀರಿ?" ಪ್ರಭಾಕರ ಸಹಜ–ಸರಳತೆ ಯೊಡನೆಂದ.

"ಜರೂರು ಕೆಲಸ ಬಿದ್ದಿರಬಹುದು! ಕೆಮರಾ ಸಿಗುರಿಯಂತೆ ತಿರು ಗುವಷ್ಟು ಸಮಯ ಆ ಕೆಲಸದ ನೆನಪು ಬರಲಿಲ್ಲ...ನಾನೂ ಹೋಗು ತ್ತೇನೆ...ನನ್ನ ಮಗನು ಹಾಸಿಗೆ ಹಿಡಿದಿದ್ದಾನೆ ಮದ್ದು ತರಬೇಕಾ ಗಿದೆ" ಬಲವಾಗಿ ಪಾದವನ್ನೊಮ್ಮೆ ಮೆಟ್ಟಿ ಕ್ರೋಧದಿಂದಲೇ ನಡೆದು ಬಿಟ್ಟ.

ಪ್ರಭಾಕರನ ಮುಖದಲ್ಲಿ ಮಂದಸ್ಮಿತ ಮಿಂಚಿತು. ಕಡೆಗಣ್ಣಿ ನಿಂದವನು ನೋಡಿದ. ಎಲ್ಲರೂ ಹೋಗುವ ತವಕೋತ್ಸಾಹ ಭರಿತ ರಾಗಿದ್ದರೆಂದು ಊಹಿಸಿದ. ತಾನು ಇಲ್ಲಿಂದ ಕಂಬಿ ಕಿತ್ತರೆ, ಯಾರೊ ಬ್ಬರೂ ನಿಲ್ಲಲಾರರೆಂದಾತ ತಿಳಿದುಕೊಂಡ. ಹೊತ್ತುಕೊಂಡ ಜವಾ ಬ್ದಾರಿಯ ಭಾರ ತನ್ನ ತಲೆಯ ಮೇಲೆ ಉಳಿದಿರುವಂತಾತನಿಗೆ ಭಾಸವಾ ಯಿತು. ಅವನು ತಿರುಗಿ ತನ್ನ ಕಾರ್ಯದಲ್ಲಿ ತೊಡಗಿದ; ಆದರೆ, ಉಳಿ ದವರನ್ನು ಕರೆದೇ ಕಾರ್ಯದಲ್ಲಿ ತೊಡಗಿಸಬೇಕಾಯಿತು,

"ನಾವು ಯಾವಾಗಲೂ ಅನ್ಯರನ್ನು ನಮ್ಮ ದೃಷ್ಟಿಯಲ್ಲಿ ತೂಗಿ ನೋಡ ತೊಡಗಿದರೆ, ನಾವು ಇಂದಿರುವಲ್ಲಿಯೇ ನಾಳೆಯೂ ಇದ್ದು ಬಿಡ ಬೇಕಾಗುವುದು. ನಾವು ದುಡಿದು ಬೇರೆಯವರಿಗೆ ಪುಥಾಹ್ವಾನ ನೀಡ ಬೇಕು. ಅವರು ಹೋದರು, ನಾವೂ ಹೊರಟು ಹೋಗುವೆವು ಎಂಬುದು ತರ್ಕವೆನ್ನಿಸಲಾರದು"—ಪ್ರಭಾಕರ ಹೇಳುತ್ತಿದ್ದ. ಆ ಕ್ಷಣವೇ ಒಬ್ಬ ನವಾಗಂತುಕನು ಬಂದು ಆತನ ಕಿವಿಯಲ್ಲಿ ಏನನ್ನೋ ಗೊಣಗುಟ್ಟಿದ. ಒಂದು ಕ್ಷಣ ಆತನ ಮುಖವರ್ಣ ಕಳೆಗುಂದಿತು; ಮರುಕ್ಷಣದಲ್ಲಿಯೇ ಅದು ಭಯಂಕರ ರೂಪ ಧರಿಸಿ ಕಠೋರವಾಗಿ ಹೋಯಿತು.

"ಸಮುದ್ರ ಮಥನದ ಸ್ಮರಣೆ ನಿನಗಾಯಿತು, ದೇವತೆಗಳ ಚತು ರತೆಯನ್ನೂ ನೀನು ಉಲ್ಲೇಖಿಸಿದೆ. ಆದರೆ, ಭಗವಾನ್ ಶಿವನನ್ನೇ ನೀನೇಕೆ ಮರೆತು ಬಿಡುತ್ತಿ?" — ಪ್ರಭಾಕರ ಲೀಲಾಧರನ ಕಡೆಗೆ ನೋಡುತ್ತ ಹೇಳಿದ.

ಮೊದಲೊಮ್ಮೆ ಲೀಲಾಧರನು ವಿಸ್ಮಯ ಚಕಿತನಾದ. ಆದರೆ, ತತ್‌ಕ್ಷಣ, ತನಗಲ್ಲ; ಬೇರೆಯವರಿಗಾಗಿ ಈ ಮಾತುಗಳನ್ನು ಆಡುತಿ ದ್ದನೆಂದು ತಿಳಿಯಿತು. ತನ್ನತ್ತ ಶೂನ್ಯದೃಷ್ಟಿ ಚೆಲ್ಲುತಿದ್ದ ಪ್ರಭಾಕರ ಅವನ ಮುಂದಿದ್ದ.

"ಅದು ವಿಲಕ್ಷಣ ಸನ್ನಿವೇಶವಾಗಿತ್ತು- ಕಾಲಕೂಟದಿಂದ ಉತ್ಪ ನ್ನವಾದ ಆ ವಿಷವಾಗ್ನಿ ಪೃಥ್ವಿಯನ್ನು ಭಸ್ಮಮಾಡುತಿತ್ತು. ಆಗ, ಮಹಾದೇವ ನಿಂತುಕೊಂಡಿದ್ದನು. ದೃಢನಾಗಿದ್ದನು; ಅಚಲನಿದ್ದನು. "ಶಿವೋಹಂ"ನ ಪಾವನ ಮಂತ್ರವು ದಶದಿಶೆಯಲ್ಲೂ ಪ್ರತಿಧ್ವನಿಸುತಿತ್ತು ಮತ್ತು...ಮತ್ತು..." ಪ್ರಭಾಕರನ ಚಿತ್ತ ಸಂತುಲನಗೊಂಡಿತು....ಆತ ನೊಂದ ಹೃದಯದಿಂದ ಮುಂದುವರಿಸಿದ— "....ಈಗ ತಾನೇ ಸುದ್ದಿ ಯೊಂದು ಬಂತು...ಇನ್ನೂರು ರೂಪಾಯಿಗಳಿಗೆ ನನ್ನ ಮನೆ ಹರಾಜಾಗಿ ಹೋಗುವ ಗಳಿಗೆ ಬಂತು! ಮರ್ಯಾದೆ ಅದೆಷ್ಟು ಪ್ರೀತಿಯದಾಗಿದೆ! ನನ್ನ ತಾಯಿಯು ನಾಲ್ಕನೆಯ ಮಾಳಿಗೆಯಿಂದ ಕಾಲುಜಾರಿ ಜೀವ ಬಿಟ್ಟಿ ದ್ದಳು. ಆದರೆ,....ನಾನು?..."

ಪ್ರಭಾಕರ ಬಿಕ್ಕಳಿಸುತ್ತ ಅತ್ತುಬಿಟ್ಟ!

## ಉಪಯುಕ್ತವಾದ ಕೆಲವು ಪುಸ್ತಕಗಳು

| ಪುಸ್ತಕ | ಲೇಖಕ / ಅನುವಾದಕ | ರೂ. ನ. |
|---|---|---|
| ಇಂದಿನ ವಿಜ್ಞಾನ ಮತ್ತು ಇಂದಿನ ಮಾನವ | (ಅನು: ಯು. ಲಕ್ಷ್ಮೀನಾರಾಯಣಾಚಾರ್ಯ) | 1=50 |
| ನಡುಹಗಲಿನ ಕಗ್ಗತ್ತಲೆ | (ಅನು: ಕು. ಶಿ. ಹರಿದಾಸ ಭಟ್) | 2=50 |
| ಶಿಕ್ಷಣದ ಧ್ಯೇಯಗಳು | (ಅನು: ಕೆ. ಬಿ. ರಾಮಕೃಷ್ಣ ರಾವ್ ಮತ್ತು ಯು. ಲಕ್ಷ್ಮೀನಾರಾಯಣಾಚಾರ್ಯ) | 2=25 |
| ಸ್ವಾತಂತ್ರ್ಯ ಮತ್ತು ಸಂಸ್ಕೃತಿ | (ಅನು: ಕು.ಶಿ.ಹರಿದಾಸ ಭಟ್) | 2=00 |
| ಹಿರೋಶಿಮಾದಿಂದ ಜಿನೇವ | (ಯು. ಆರ್. ಆಚಾರ್ಯ) | 1=50 |
| ಮೋಹದ ಮಹಾಜಾಲ | (ವೀರಪ್ಪ ಯುಗಟಿ) | 1=75 |
| ಭಾರತೀಯ ಮಹಾಪುರುಷರು | (ಎಸ್. ಗೋಪಿಚಂದ ರಾವ್) | 1=50 |
| ಕಥಾ ಕೌಮುದಿ | (ಎಸ್. ಗೋಪಿಚಂದ ರಾವ್) | 1=50 |
| ಅದೃಷ್ಟಶಾಲಿ ರಾಷ್ಟ್ರನಾಯಕ ಜಾರ್ಜ್ ವಾಷಿಂಗ್ಟನ್ | (ಅನು: ಯು. ಲಕ್ಷ್ಮೀನಾರಾಯಣಾಚಾರ್ಯ) | 1=25 |
| ಏಶಿಯದ ಸಂಪತ್ತು | (ಕು. ಶಿ. ಹರಿದಾಸ ಭಟ್) | 2=00 |
| ಅಮೇರಿಕದ ಆರು ಕತೆಗಳು | (ಅನು: ಕು.ಶಿ.ಹರಿದಾಸ ಭಟ್) | 1=75 |
| ಕುಲವಿಲ್ಲದ ಹೆಣ್ಣು | (ಪಿ. ವೆಂಕೋಬಾಚಾರ್ಯ) | 1=50 |
| ಚಿತ್ರಾಂಗದೆ | (ಅನು: ಕೆ. ಕೆ. ಶೆಟ್ಟಿ) | 0=60 |
| ರವೀಂದ್ರರ ಕತೆಗಳು | (ಹನುಮಂತ ರಾವ್ ಮೊಂಜ್ರೇಕರ) | 0=90 |
| ಹಸುರು ಹಂಸ | (ನಚಿಕೇತ) | 2=00 |
| ಭಾವಾರ್ಜನೆ | (ನಚಿಕೇತ) | 1=25 |
| ಋಣ ಯಾತ್ರೆ | (ನಚಿಕೇತ) | 1=50 |
| ಗೀತೆಯ ಕೈಗನ್ನಡಿ | (ಹೊಸಕೆರೆ ಚಿದಂಬರಯ್ಯ) | 1=00 |

ವಿವರವಾದ ಕೆಟಲಾಗಿಗೆ ಬರೆಯಿರಿ:

**ನವಯುಗ ಪ್ರೆಸ್, ಉಡುಪಿ**

ವಿಕ್ರಯಾಧಿಕಾರಿಗಳು: ನವಭಾರತ ಪುಸ್ತಕ ಭಂಡಾರ, ಉಡುಪಿ

ನಿಮ್ಮಷ್ಟಕ್ಕೆ ನೀವೇ ಇಂಗ್ಲಿಷ್ ಕಲಿಯಬೇಕೆಂದಿದ್ದರೆ—
ವ್ಯಾಕರಣಬದ್ಧವಾಗಿ ಇಂಗ್ಲಿಷ್ ಮಾತಾಡಬೇಕೆಂದಿದ್ದರೆ—
ದಿ। ಶ್ರೀ. ಕೊರಡ್ಕಲ್ ಶ್ರೀನಿವಾಸರಾಯರಿಂದ ವಿರಚಿತವಾದ—

# ಸುಲಭದಲ್ಲಿ ಇಂಗ್ಲಿಷ್

ವಿದ್ಯಾರ್ಥಿಗಳಿಗೂ ವಯಸ್ಕರಿಗೂ ಅತ್ಯುಪಯುಕ್ತವಾದುದು

ಬೆಲೆ: ರೂ. ಎರಡು. ಉತ್ತಮ ಪ್ರತಿ: ರೂ. ಎರಡೂವರೆ

---

ಇಂಗ್ಲಿಷಿನಲ್ಲಿ ಪತ್ರವ್ಯವಹಾರ ನಡೆಸಲು ಅನುಕೂಲವಾದ

# LETTER WRITING MADE EASY

ದಿನವಹಿ ಪತ್ರವ್ಯವಹಾರಕ್ಕೆ ಬೇಕಾಗಬಹುದಾದ 75 ಇಂಗ್ಲಿಷ್ ಪತ್ರಗಳು
ಉಪಾಧ್ಯಾಯರಿಗೂ, ವಿದ್ಯಾರ್ಥಿಗಳಿಗೂ, ವಿಶೇಷ ಸಹಕಾರಿ.

ಬೆಲೆ: ರೂ. 1-25

---

ಮನೆಯೊಂದಾದಲ್ಲಿ ಇರಲೇಬೇಕಾದ ಗೃಹವೈದ್ಯ

# ಮನೆ ಮದ್ದು

ಬರೆದವರು: ಡಾಕ್ಟರ್ ಕೊರಡ್ಕಲ್ ವೆಂಕಟ್ರಾವ್ ಎಲ್.ಐ.ಎಮ್

ಮಕ್ಕಳ, ಹೆಂಗಸರ, ಗರ್ಭಿಣಿಯರ, ಇತರ ಎಲ್ಲಾ ಸಾಮಾನ್ಯ ಕಾಹಿಲೆಗಳಿಗೂ ಮನೆಯಲ್ಲೇ ಮದ್ದು ಮಾಡುವ ವಿಧಾನವು ವಿವರಿಸಲ್ಪಟ್ಟಿದೆ. ಹೆರಿಗೆ ವಿಧಾನ ಸವಿಸ್ತಾರವಾಗಿ ಕೊಡಲ್ಪಟ್ಟಿದೆ. ಬೆಲೆ: ರೂ. ಎರಡು

ನವಭಾರತ ಪುಸ್ತಕ ಭಂಡಾರ, ಉಡುಪಿ.

ಶಾಲಾ ಕಾಲೇಜು, ಪಂಚಾಯತು
ಮೊದಲಾದವುಗಳ ಲೈಬ್ರೆರಿಗಳಿಗೆ
ಬೇಕಾಗುವ

# ಕನ್ನಡ ಪುಸ್ತಕಗಳು

ದೊರೆಯುತ್ತವೆ

'ಅಂತರಂಗ'ದ ಪ್ರಕಟಣೆಗಳು
'ಕಿರಿಯರ ಪ್ರಪಂಚ'ದ ಪುಸ್ತಕಗಳು
ವಿಶೇಷ ರಿಯಾಯತಿ ದರದಲ್ಲಿ
ಸಿಗುತ್ತವೆ.

ಕೆಟಲಾಗಿಗೆ ಬರೆಯಿರಿ

ನವಭಾರತ ಪುಸ್ತಕ ಭಂಡಾರ
ಸಂತೆಕಟ್ಟೆ, ಉಡುಪಿ

# ನವಯುಗ

ಉಜ್ವಲ ರಾಷ್ಟ್ರೀಯ ವಾರಪತ್ರಿಕೆ

ಕರ್ನಾಟಕದಲ್ಲೆಲ್ಲಾ
ಪ್ರಚಾರದಲ್ಲಿರುವುದರಿಂದ
ಜಾಹೀರಾತಿಗೆ
ಉತ್ತಮ ಸಾಧನ

1921 — 44 ನೆ ವರ್ಷ — 1964

ವಾರ್ಷಿಕ ಚಂದಾ ರೂ. 10/-
ಜಾಹೀರಾತು ದರಗಳಿಗೂ ಮಾದರಿ ಪ್ರತಿಗೂ
ಬರೆಯಿರಿ

ಮೆನೇಜರ್,

ನವಯುಗ ವಾರಪತ್ರಿಕೆ, ಉಡುಪಿ

# ನನ್ನ ಬ್ಯಾಂಕಿಗೂ ನನ್ನ ವ್ಯಾಪಾರಕ್ಕೂ ಅನ್ಯೋನ್ಯ ಸಂಬಂಧ



ಗ್ರಾಮೀಣ ಪ್ರದೇಶಗಳಲ್ಲಿ ಬ್ಯಾಂಕಿಂಗ್ ವಿಸ್ತರಿಸುವ ಸಿಂಡಿಕೇಟಿನ ಆದ್ಯ ಪ್ರಯತ್ನಗಳು ಅವರ ಜೀವನ ಕ್ರಮಗಳನ್ನು ಬದಲಾಯಿಸುವಲ್ಲಿ ಫಲಕಾರಿಯಾಗಿವೆ.




ದಿನಸಿತ್ಯ ಗಳಿಸುವ ಮಂದಿಗೆ "ಪಿಗ್ಮಿ" ಗಿಂತ ಚೆನ್ನಾದ ಉಳಿತಾಯ ಯೋಜನೆ ಬೇರೊಂದಿಲ್ಲ!

**ಸಿಂಡಿಕೇಟ್ ಬ್ಯಾಂಕ್ ಲಿಮಿಟೆಡ್,**

ರಿಜಿಸ್ಟರ್ಡ್ ಆಫೀಸ್: ಮಣಿಪಾಲ